ಒಂಬತ್ತನೇ ವರ್ಷದ—ಐದನೆ ಕಿರಣ.

# ಆಶಾ ಬಾಳು!

( ಸ್ವತಂತ್ರ ಸಾಮಾಜಿಕ ಕಾದಂಬರಿ )



ಲೇಖಕರು :

**ಶ್ರೀ. ಪಿ. ಶ್ರೀಧರರಾಯರು**

ಪ್ರತಿಭಾ ಗ್ರಂಥಮಾಲೆ,

ಭಗತಸಿಂಗ ಬೀದಿ,

ಧಾರವಾಡ.

ಒಂದನೇ ಜುಲೈ ೧೯೫೨.



ಒಂದೂಕಾಲು ರೂಪಾಯಿ

# ಮಾಲೆಯ ಪರವಾಗಿ.

ಶ್ರೀ. ಪಿ. ಶ್ರೀಧರರಾಯರ ಈ ಹೃದಯಂಗಮವಾದ ಚಿಕ್ಕ ಕಾದಂಬರಿಯನ್ನು ನಮ್ಮ ಮಾಲೆಯ ಐದನೆ ಕಿರಣವನ್ನಾಗಿ ಬೆಳಗಿಸಲು ತುಂಬ ಆನಂದವೆನಿಸುತ್ತದೆ. ಪ್ರಥಮ ಕೃತಿಯಾಗಿದ್ದರೂ ಬೇಗನೆ ಇದು ಎಲ್ಲರ ಪ್ರೇಮಾದರಗಳಿಗೆ ಪಾತ್ರವಾಗುವದರಲ್ಲಿ ಸಂದೇಹವಿಲ್ಲ. ಇಂಥ ಶ್ರೇಷ್ಠ ಕೃತಿಯನ್ನು ನಮಗೆ ಬರೆದುಕೊಟ್ಟು ನೆರವಾದುದಕ್ಕಾಗಿ ಶ್ರೀಯುತರಿಗೆ ನಾವು ತುಂಬ ಆಭಾರಿಯಾಗಿದ್ದೇವೆ.

ಇನ್ನು ಪ್ರತಿಭಾ ಗ್ರಂಥಮಾಲೆಯು ೧೯೫೨ ನೇ ವರುಷದ ಕೊನೆಯ ಪುಸ್ತಕವೊಂದನ್ನು ಸಲ್ಲಿಸುವದು ಮಾತ್ರ ಬಾಕಿ ಉಳಿದಿದೆ. ಡಿಸೆಂಬರ ಮೊದಲ ವಾರದಲ್ಲಿ ಅದು ಚಂದಾದಾರರ ಕೈಸೇರುತ್ತದೆ. ಸಮಯಕ್ಕೆ ಮುಂಚಿತವಾಗಿಯೇ ಪುಸ್ತಕಗಳನ್ನು ಸಲ್ಲಿಸಿ ಎಲ್ಲರ ಮೆಚ್ಚುಗೆಗೆ ಪಾತ್ರವಾದ ಈ ಗ್ರಂಥಮಾಲೆಗೆ ಹೆಚ್ಚು ಹೆಚ್ಚು ಜನ ಚಂದಾದಾರರಾದಲ್ಲಿ ಇನ್ನೂ ಹೆಚ್ಚಿನ ಸೇವೆ ಸಲ್ಲಿಸಬಹುದಾಗಿ ಆಶ್ವಾಸನೆಯನ್ನು ಕೊಡುತ್ತೇವೆ.

—ಸಂಪಾದಕ

ಮುದ್ರಕರು ಮತ್ತು ಪ್ರಕಾಶಕರು:
ಭಾಲಚಂದ್ರ ವೆಂಕಟೇಶ ಘಾಣೇಕರ,
**ಪ್ರತಿಭಾ ಮುದ್ರಣ,** ಭಗತಸಿಂಗ-ಬೀದಿ, **ಧಾರವಾಡ.**

# ಮುನ್ನುಡಿ.

---

ಪ್ರೌಢ ಶಿಕ್ಷಣಕ್ಕಾಗಿ ಪರವೂರನ್ನಾಶ್ರಯಿಸಿದ ಯೌವ್ವನೆ ಸುದತಿಯೋರ್ವಳು, ಬೆಳೆಯುತ್ತಿರುವ ಯೌವನದೊಡನೆ ಪ್ರೇಮದ ಅಮರ ಜ್ಯೋತಿಯನ್ನು ತನ್ನ ಆದರ್ಶವಾಗಿರಿಸಿಕೊಂಡು, ತನ್ನ ಸಹವರ್ಗದಲ್ಲಿದ್ದು ಸರ್ವ ವಿಚಾರಗಳಲ್ಲೂ ಮಿಗಿಲೆನಿಸಿದ ಯುವಕನನ್ನು ತನ್ನ ಆತ್ಮೀಯನನ್ನಾಗಿ ಪರಿವರ್ತಿಸುವ ಪ್ರಯತ್ನದಲ್ಲಿ ಜಯಶೀಲಳಾಗಿ, ಅವನ ಸಹಕಾರದಿಂದ ಸಕಲ ವಿದ್ಯಾ ವಿಷಯಗಳಲ್ಲೂ ಪ್ರವೀಣಳೆನಿಸಿ ಸುಖದಾನಂದಗಳ ಸವಿಯೂಟವನ್ನುಂಡರೂ, ಕಾಲನ ಲೀಲೆಯಲ್ಲಿ ಬಂಧಿತಳಾದಾಗ ಪ್ರಣಯಿಯನ್ನು ಸೇರಲಾರದೆ ವಿರಹಕ್ಕೆ ತುತ್ತಾಗಿ, ಸಮಾಜದ ಅಂಧತೆಯನ್ನು ಧಿಕ್ಕರಿಸಿಕೊಂಡು ಪ್ರಣಯಿಯನ್ನು ಅನ್ವೇಷಿಸುತ್ತಾ ಊರಿಂದೂರಿಗೆ ಅಲೆದು, ಅವನ ಪತ್ತೆಯಾಗದಿರಲು, ಹೊಟ್ಟೆಯ ಹಸಿವಿಗಾಗಿ, ಆಶ್ರಯ ನೀಡಿದ ಜೀವಿಯಲ್ಲಿ ತನ್ನ ದೇಹವನ್ನು ವಿಕ್ರಯಿಸಿ, ಮತ್ತೂ ಅನಾಡಳಾಗಿ ಅಡ್ಡಾಡಿ, ಜೀವನದಲ್ಲಿ ಜಿಗುಪ್ಸೆ ತಾಳಿ, ಮಗದೊಮ್ಮೆ ಬಾಳುವ ಆಶೆಯಿಂದ ಓರ್ವ ಶ್ರೀಮಂತ ವ್ಯಾಪಾರಿಯನ್ನು ಸೇರಿ, ಬಾಳಿನ ಸವಿಯನ್ನು ಕಂಡ ದುರಂತ ಬಾಳಿನ ಚಿತ್ರವನ್ನು—ಕೆಲಸದ ಮಧ್ಯೆ ಆಯಾಸವನ್ನು ಕಳೆವಾಗ ಬಾಯಿ ಚಪ್ಪರಿಸಿಕೊಳ್ಳುವ ಹೆಂಗಸರೀರ್ವರ ಸಂಭಾಷಣೆಯಲ್ಲಿ ಹೆಣೆಯಲಾಗಿದೆ. ಇಂತಹ ಸ್ತ್ರೀಯರು ಸಮಾಜದಲ್ಲಿರಬಹುದೇ ಎಂದು ಹಲವರು ಆಲೋಚಿಸಬಹುದು ! ಆದರೆ ಅಂತಹರಿರಬಾರದೇ ಎಂಬುದು ನನ್ನ ಪ್ರಶ್ನೆ ?

ಕೆಲವರಿಗೆ ಈ ಕಾದಂಬರಿಯು ನಾನಾ ವಿಧವಾಗಿ ಕಾಣಬಹುದು.... ಪಚ್ಚೆ ಪೈರನ್ನು ಕಂಡೊಡನೆ ಬುಡ ಸಹಿತ ಕಿತ್ತು ತಿನ್ನುವ ಪಶುಗಳಂತೆ, ಕನ್ನಡದಲ್ಲಿನ ಕೃತಿಗಳಿಗೆ....ತಪ್ಪಿ ಬಿದ್ದಲ್ಲಿ ಸೂಕ್ತ ಸಲಹೆಯನ್ನೀಯುವ ಬದಲು, ಮುಂದಕ್ಕೆ ತಲೆಯೆತ್ತದಂತೆ ಸದೆಬಡಿಯುತ್ತಿರುವ ವಿಮರ್ಶಕರ

ಲೇಖಕನಿಗೆ ಮಾತ್ರ ಇದೂ ಒಂದು ರಸದೂಟವಾಗಲೂ ಬಹುದು—ಅಂತೂ ಇದು ನನ್ನ ಮೊದಲ ಕೃತಿ.

ಈ ನನ್ನ ಮೊದಲ ಕೃತಿಯ ಬೆಳವಣಿಗೆ ಹಾಗೂ ಜೋಡಣೆಗಳಲ್ಲಿ ನೆರವಾಗಿ, ಉದಾರ ಹಸ್ತದಿಂದ ತಮ್ಮ ಪರಿಶ್ರಮವನ್ನರಿಯದೆ ಸಹಕಾರ ವನ್ನಿತ್ತು ನನಗೆ ನೆರವಾದ ಶ್ರೀಯುತ ಕೆ. ರಾ. ಸುವರ್ಣರವರಿಗೆ ನನ್ನ ಕೃತಜ್ಞತಾಪೂರ್ವಕ ವಂದನೆಗಳು. ಈ ನನ್ನ ಮೊದಲ ಕೃತಿಯನ್ನು ಆದರ ದಿಂದ ಪ್ರಕಟಿಸಿ ಸಾಹಿತ್ಯ ರಂಗದಲ್ಲಿ ಕಾಲಿರಿಸುವಂತೆ ಪ್ರೋತ್ಸಾಹಿಸಿದ ಪ್ರತಿಭಾ ಗ್ರಂಥಮಾಲೆಯ ಒಡೆಯರಾದ ಶ್ರೀ. ಭಾಲಚಂದ್ರ ಘಾಣೇಕರರು ವಿಶ್ವಾಸವಿಟ್ಟು, ಈ ಕೃತಿಯನ್ನು ಪ್ರಕಟಿಸಿದುದಕ್ಕಾಗಿ ಅವರಿಗೆ ಹೃತ್ಪೂರ್ವಕ ವಂದನೆಗಳು. ಇನ್ನು, ಇದನ್ನು ಓದುವ ಸಕಲ ಬಂಧುವರ್ಗಕ್ಕೂ ಕೊನೆಯ ವಂದನೆಗಳು.

‘ ದುರ್ಗಾ ’<br>
ಮಂಗಳೂರು.<br>
೨೧—೩—೧೯೫೨

ಪಿ. ಶ್ರೀಧರರಾವ್

# ಆಶಾಬಾಳು

—:@:—

**ಸೂ**ರ್ಯಕಾಂತಿ ಆ ಮನೆಯೆದುರು ಅದಾಗಲೆ ಅರಳಿ ಅಂದದಿಂದ ರಾರಾಜಿಸುತ್ತಿತ್ತು. ವಿಶಾಲ ವಿಸ್ತಾರವಾದ ಪುಷ್ಪವನದ ಮಧ್ಯೆ ವನಧಿ ರಾಜನಂತೆ ತಲೆಯೆತ್ತಿ ನಲಿಯುತ್ತಿತ್ತು. ಅಚ್ಚುಕಟ್ಟಾಗಿ ಹರಡಿದ್ದ ವನದ ಹಿಂಭಾಗದಲ್ಲಿ ಅದೊಂದು ಮನೆ. ಅದಕ್ಕಿದ್ದ ಮಾಳಿಗೆ, ಅದನ್ನು ಅರಮನೆಯಂತೆ ಬೆಳಗಿಸುತ್ತಿತ್ತು. ಬರೀ ಕಿರುಮನೆಯಾದರೂ ಅರಮನೆ ಎದುರು ರಾರಾಜಿಸುವ ಉದ್ಯಾನವನದಂತೆ ಕಿರುತೋಟ; ಹಸನಾಗಿ ಬೆಳೆದ ಹುಲ್ಲಿ ನಮಧ್ಯೆಯಿಂದ ಕೊರೆದ ಕಾಲುದಾರಿ; ನಡುವಂಗಣದಲ್ಲಿ ಚಿಮ್ಮುವ ಕಾರಂಜಿ. ಕಾರಂಜಿಯ ದಂಡೆಯ ಸುತ್ತಲೂ ಮಂಡಲದಂತಿಟ್ಟ "ಕ್ರೋಟೆನ್" ಚಟ್ಟಿಗಳ ಸಾಲು. ಗಿಡದಲ್ಲಿ ಅರೆಬಿರಿದಿರುವ ಪುಷ್ಪಗಳು ಬಣ್ಣದೆಲೆಗಳೆಡೆಯಿಂದ ಬಾಹ್ಯ ಪ್ರಪಂಚವನ್ನು ನವತಾರುಣ್ಯದ ತರುಣಿಯರು ಕಿಡಿಕಿ ಎಡೆಯಿಂದ ಇಣುಕುವಂತೆ ಹೊರ ಕಾಣಿಸುತಿದ್ದುವು. ತೋಟದ ಸುತ್ತಲೂ ಕಟ್ಟಿದ ಬೇಲಿಯಲ್ಲಿ ಹರಿಯಬಿಟ್ಟಿರುವ ಹಚ್ಚ ಹಸುರು ಲತಾಪುಂಜವು ತೋಟಕ್ಕೆ ಹಸುರು ಪಂಜರೆಯನ್ನಿಡಿಸಿದಂತೆ ಕಂಗೊಳಿಸುತ್ತಿತ್ತು. ಮೂಲೆಮೂಲೆಗಳಲ್ಲೊಂದು ಸಂಪಗೆಯ ಮರ; ಮುಂಜಾವದ ತಂಗಾಳಿಯಲ್ಲಿ ಅರಳಿದ ಹೂಗಳ ಪರಿಮಳ ಗಮಗಮಿಸುತ್ತಿದ್ದು, ಅದೇ ಮರಗಳಿಗಂಟಿಕೊಂಡಿದ್ದ ಜಾಜಿಯ ಬಳ್ಳಿಯಡಿಯಲ್ಲಿ ಬಾಡಿ ಬಿದ್ದಿದ್ದುವು. ಒಂದೆಡೆ ಪಾರಿಜಾತದ ಗಿಡವೊಂದು ರಥದಾಕಾರದಲ್ಲಿ ಹರಡಿದ್ದು, ಅದರಡಿಯಲ್ಲಿ ಉದುರಿಬಿದ್ದ ಹೂ, ಸಜ್ಜುಗೊಳಿಸಿದ ಹಾಸಿಗೆಯಂತೆ ಶುಭ್ರವಾಗಿ ಹೊಳೆಯುತ್ತಿತ್ತು. ಸಾಲುಗಟ್ಟಿ, ಅಲ್ಲೊಂದು ಇಲ್ಲೊಂದು ನೆಟ್ಟಿದ್ದ ಗುಲಾಬಿ ಮತ್ತು ಸೂರ್ಯಕಾಂತಿಯ ಗಿಡಗಳು ಆಧಾರಕ್ಕೆ ಹೂತಿರುವ ಸಳಾಕೆಗಳಿಗಾನಿಸಿಕೊಂಡು, ನಲ್ಲನನ್ನಾಲಿಂಗಿಸಿಕೊಂಡಿರುವ ನಲ್ಲೆಯಂತೆ, ತಮ್ಮ ಎಳೆ ಚಿಗುರನ್ನು ಗಾಳಿಗೊಡ್ಡಿದ್ದುವು. ಗುಲಾಬಿಯ ಅರಳಿದ ಎಸಳುಗಳೆಡೆಯಿಂದ ಹೊರಹೊಮ್ಮುವ ಸುಗಂಧದ ಕಂಪು ಇಡೀ ಹಿತ್ತಲನ್ನೇ ಗಮಗಮದಿಂದ ರಮಿಸುತ್ತಿತ್ತು. ರೆಂಬೆಗಳ

ತುದಿಯಲ್ಲಿ ರಮಿಸುತ್ತಿದ್ದ ಸೂರ್ಯಕಾಂತಿ ಪುಷ್ಪಗಳು ಸುಯ್ಯನೆ ತೀಡುತ್ತಿರುವ ಗಾಳಿಯ ರಭಸಕ್ಕೆ ತಲೆದೂಗಿ, ತಮ್ಮ ಜೆಡಗನ್ನು ಅಳಪಡಿಸಿ ಹಿಮಸ್ವರೂಪವಾದ ತಮ್ಮ ಕೋಮಲ ಮುಖಾರವಿಂದವನ್ನು ರಸಿರಾಜನಿಗೆ ಮುದ್ದಿಸಲು ಮುನ್ನೀಡುವಂತೆ ಮುಖವನ್ನು ಮೇಲೆತ್ತುತ್ತಿದ್ದುವು. ಮಾನಸೇಶ್ವರಿ ತನ್ನನ್ನು ಕೊಯ್ದು ಸಿರಿಮುಡಿಯಲ್ಲಿ ಮುಡಿದು ತನ್ನ ಅಂದವನ್ನೆಲ್ಲಿ ಹಾಳುಗೈಯ್ಯುವಳೋ ಎಂಬ ಸಂಶಯಾತುರದ ಭಯದಿಂದ, ಬೀಸುತ್ತಿರುವ ಮಂದಮಾರುತದಲ್ಲೋಲಾಡಿಕೊಂಡು ತಾನವಳಿಗೆ ಕಾಣಬಾರದೆಂಬ ನಿರ್ಧಾರದಿಂದಲೋ ಎಂಬಂತೆ ಹರಡಿರುವ ಎಲೆಗಳೆಡೆಯಲ್ಲಿ ಅಡಗಡಗಿ ತೂಗುಯ್ಯಾಲೆಯಲ್ಲಿ ಜೋಲಾಡುವಂತ ಮುಖದರ್ಶನಪೀಯುತ್ತಿದ್ದುವು; ಅರಳುಮೊಗ್ಗೆಗಳನ್ನೂ ಹಿಂದಿನ ದಿನವರಳಿ ಬಾಡಿ ಉಳಿದ ಹೂಗಳನ್ನೂ ಕಂಡು, ಅರಳಿ ಮೆರದಾಡುವ ಹೂ, ತನ್ನ ತನ್ನ ಸೌಂದರ್ಯವನ್ನು ಅದರೊಡನೆ ಹೋಲಿಸಿ, ಹರ್ಷಗೊಂಡು ನಗುತ್ತಿರುವುದೋ ಎಂಬಂತೆ ಅದರ ತೇಕಲಾಟವು ಈಕ್ಷಿಸುತ್ತಿರುವ ಪ್ರಕೃತಿಗೆ ಕಂಡುಬರುತ್ತಿತ್ತು.

ಮನೆಯೊಡತಿ ಶಾಂಭವಿ ಆಗಲೆ ಎದ್ದು, ಸಡಗರದಿಂದ ತನ್ನ ಪ್ರಾತರಾಹ್ನಿಕಗಳನ್ನು ತೀರಿಸಲು, ಮನೆಗೆಲಸಕ್ಕೆ ಕೈಯಿಕ್ಕಿ ಬೇಗಬೇಗನೆ ಮುಗಿಸಲು ಪ್ರಯತ್ನಿಸುತ್ತಿದ್ದರು. ಆತುರದ ಸಡಗರದ ನಲಿದಾಟವನ್ನು ಕಂಡಾಗ ಅವರೇನೋ ಮಹತ್ವದ ಕೆಲಸವೊಂದನ್ನು ತೀರಿಸಲು ಪ್ರಯತ್ನಿಸುವಂತೆ ತೋರುತ್ತಿತ್ತು. ಕಸಮುಸರೆಗಳನ್ನೆಲ್ಲಾ ಜಾಡಿಸಿ ತೊಳೆದು ನಿಮಿಷಾರ್ಧದಲ್ಲಿ ತೀರಿಸಿದರು. ಮಧ್ಯಾಹ್ನದ ಊಟದೇರ್ಪಾಡು ಅಲ್ಪ ಸಮಯದಲ್ಲೇ ತೀರಿಸಿದುದಾಯಿತು. ಕೆದರಿದ ಹೆರಳೆಲ್ಲವನ್ನೂ ಬಿಚ್ಚಿ, ಎಣ್ಣೆ ತೀಡಿ, ತಲೆ ಬಾಚಿ, ಎರಡು ಕುಚ್ಚು ಹೂ ಮುಡಿದು, ಗಗನದಲ್ಲಿ ಮಿನುಗುತ್ತಿರುವ ತಾರೆಯಂತಹ ಚಿಕ್ಕ ಕುಂಕುಮದ ಬೊಟ್ಟನ್ನಿಟ್ಟುದಾಯಿತು. ಕಿರುಜಗಲಿಯ ಗೋಡೆಗಾನಿಸಿ ಇಟ್ಟಿದ್ದ ಗೆರಸೆಯನ್ನು ತಂದು ನಡುಮನೆಯಲ್ಲಿ ಮಡಗಿದಾಗ, ಅದರಿಂದುಂಟಾದ ಶಬ್ದಕ್ಕೆ ಬೆದರಿದ ಒಂದೆರಡು ನೊಣಗಳು ಕಂಗಾಲಾಗಿ ಮೇಲಕ್ಕೇರಿ ನೆಲೆಯಿಲ್ಲದಲ್ಲಿ ಆಸರೆ ಪಡೆಯುವಂತೆ ಶಾಂಭವಿಯ ಭುಜದ್ವಯಗಳನ್ನೇರಿ ಕುಳಿತವು.

ಓ, ಹೌದೋ! ಇದೇನು ಆತುರ ಶಾಂಭವಿಯವರದು? ಜಗಲಿ

ಯಲ್ಲಿದ್ದ ಗೆರಸೆ ನಡುಮನೆ ಸೇರಿದೆ. ಶಾಂಭವಿಯವರ ಕಾಲು, ಮೂಲೆಯಲ್ಲೊರಗಿ ಕುಳಿತ ಬೀಸುಕಲ್ಲಿನ ಬಳಿ ಸಾಗಿದೆ. ಕಂಕಣಧ್ವನಿಯೊಂದಿಗೆ ನರ್ತಿಸುವ ಕೈಗಳು ಕಲ್ಲನ್ನೆತ್ತಲನುವಾಗಿವೆ....ಹಾಂ! ತಿಳಿಯಿತು, ಇನ್ನು ನಾಲ್ಕೇ ದಿನಗಳಲ್ಲಿ ಬರಲಿರುವ ಅಷ್ಟಮಿಯ ಸಡಗರವಿದು! ಉಂಡೆ ಚಕ್ಕುಲಿ ಮೊದಲಾದ ಭಕ್ಷ್ಯ ಭೋಜ್ಯಗಳನ್ನು ತಯಾರಿಸಲು ಹಾಸಿದ ಗೆರಸೆಯ ಮೇಲೆ ಬೀಸುವ ಕಲ್ಲುಗಳು ಬಂದು ಕುಳಿತವು. ಜೋಡಿಸಿದ ಮೇಲ್ಕಲ್ಲ ಗುಣಿಯಲ್ಲಿ ಅಕ್ಕಿ ಕಾಳುಗಳು ಬಿದ್ದುವು. ಗೆರಸೆಯ ಪಕ್ಕದಲ್ಲಿ ಶಾಂಭವಿ ಮಂಡಿಸಿದ್ದರು. ಒಂದು ಕಾಲನ್ನು ಮುಂಚಾಚಿ, ಇನ್ನೊಂದನ್ನು ಮಡಚಿಟ್ಟು, ಕಲ್ಲು ಹಿಡಿತಕ್ಕೆ ಕೈಕೊಟ್ಟು, ತನ್ನ ದೇಹವನ್ನು ಮುಂಬಾಗಿಸಿದರು. ಕಲ್ಲು 'ಗರ್' ಎಂಬ ಶಬ್ದದೊಂದಿಗೆ, ಅಲ್ಲಲ್ಲಿ ಹಾರಿ ಕೆಳಬೀಳುವ ಕಾಳುಗಳ 'ಚಿಟ್‌ಚಿಟ್' ಎಂಬ ಶಬ್ದ. ಪಕ್ಕದಲ್ಲಿದ್ದ ಪಾತ್ರೆಯಿಂದ ಹಿಡಿಯಕ್ಕಿಯು ಕಲ್ಲಿನ ಬಾಯಿಯನ್ನು ಪ್ರವೇಶಿಸುತ್ತಿತ್ತು. ಹೊರ ಅಂಗಳದಲ್ಲಿ ಮಂದಮಾರುತನ ಪ್ರಶಾಂತ ಗಾಳಿಗೆ ಬಾಗೇಳುವ ಸೂರ್ಯಕಾಂತಿ ಹೂವಿನಂತೆ ಶಾಂಭವಿಯ ತಲೆ ತೂಗಾಡುತ್ತಲಿತ್ತು. ಅವರಿಗೆ ಅರಿವಿಲ್ಲದಂತೆ ಸಮಯದ ಆಯಾಸ ಪರಿಹಾರಕ್ಕಾಗಿ ಕಿರುಧ್ವನಿಯಲ್ಲಿ ಕೀರ್ತನೆ ಹೊರ ಹೊಮ್ಮುತ್ತಿತ್ತು.

ನೆರೆಮನೆಯಲ್ಲಿ ಕಲ್ಲಿನ ಶಬ್ದ ಕೇಳಿದ ಸೀನುನೆಯ ತಾರ, ಬಾಗಿಲಿಕ್ಕಿಕೊಂಡು ಇತ್ತ ಸಾಗಿದಳು. ಶಾಂಭವಿಯ ಕೈನೆರವಿಗಾಗಿಯೂ ತನ್ನ ಏಕಾಂತವನ್ನು ತೊರೆದು ಹರಟೆ ಹಚ್ಚಲು ಮೆಟ್ಟಲೇರಿ ಬಂದಳು. ತಾರ...... ನವಯೌವನದ ಹಂತವೇರಿದ ರಮಣಿ. ಆದರೆ ಯೌವನದ ಕಾಂತಿ ಅದೇಕೋ ಅವಳಲ್ಲಿ ಕಳೆಗುಂದಿದಂತಿತ್ತು. ನೀಳವಾದ ಆಕೆಯ ದೇಹದಲ್ಲಿ ಬೂದಿ ಮುಚ್ಚಿದ ಕೆಂಡದಂತಹ ಸೌಂದರ್ಯವು ಒಡೆದು ಕಾಣುತ್ತಿತ್ತು. ದುಂಡಗಿನ ವಿಶಾಲ ಮುಖಮಂಡಲದಲ್ಲಿ ರಾರಾಜಿಸುವ ಕುಂಕುಮ ತಿಲಕ, ತಿದ್ದಿದ ಹುಬ್ಬುಗಳ ಕೆಳಗಡೆ ಮೋಹಕ ಕಾಂತಿಯಿಂದ ಮಿನುಗುವ ಕಣ್ಣುಗಳು, ಬಿರಿದ ಗುಲಾಬಿಯ ಕುಸುಮದಂತೆ ತುಂಬಿಕೊಂಡಿರುವ ಕಪ್ಪು ಮಿಶ್ರಿತ ಕೆಂಪು ತುಟಿಗಳು, ನಕ್ಕಾಗ ನೆರಿಬಿದ್ದ ಕೆನ್ನೆಯ ಗುಳಿಯಿಂದ ಹರಿದು ಬರುವ ನಗೆಹೊನಲು, ನೋಟಕರ ಮನಸ್ಸಿಗೆ ಮಾಟ ಮಾಡುವ ಸಹಜ

ಸೌಂದರ್ಯಗಳು. ಪುಷ್ಟವಾದ ಕೃಷ್ಣವರ್ಣದ ಕೇಶರಾಶಿಯು ಹೆಣಿಗೆಯಿಂದ ಬಂಧಿತವಾಗಿ ಬೆನ್ನಮೇಲೆ ಹರಿದಾಡುತ್ತಿದ್ದು, ಸಿರಿಮುಡಿಯನ್ನೇರಿದ ಮಲ್ಲಿಗೆ ಚೆಂಡು ಗಮುಗಮು ಪರಿಮಳವನ್ನು ಬಿತ್ತರಿಸುತ್ತಿದ್ದು, ಪೌಡರ್ ನೊಂಪಿಗೆ ತಲೆ ಬಾಗಿದ ಮುಖ, ಕೃತಕರೂಪ ತಾಳಿ ಅಂಟಿದ್ದ ಭೂಳಸ್ನ ಜಾಡಿಸಿದಂತಿತ್ತು. ಕೈಯಲ್ಲಿದ್ದ ಎರಡು ಮುಡಿಕೆ ಮಲ್ಲಿಗೆ ಹೂವನ್ನು ಹಿಡಿದುಕೊಂಡು ತಾರಳು ಶಾಂಭವಿಯಲ್ಲಿಗೆ ಬಂದು:

" ಇಕೊಳ್ಳಿಯಮ್ಮ ಮಲ್ಲಿಗೆ; ಮುಡಿದುಕೊಳ್ಳಿ. "

" ರಾಯರು ತಂದಿದ್ದರೇ ನಿನ್ನೆ ? "

" ಹೌದಮ್ಮ. ನಿನ್ನೆ ಬರುವಾಗ ಮಾರ್ಕೆಟ್ ಬಳಿ ಬಾಯಿ ಒತ್ತಾಯ ಮಾಡಿದಳಂತೆ. ಒಂದು ಹರಿವಾಣದಷ್ಟು ಅಗಲವಿತ್ತಮ್ಮ ಚೆಂಡು. ಒತ್ತಾಯದಿಂದ ಬರೀ ನಾಲ್ಕಾಣೆಗೆ ಕೊಟ್ಟುಬಿಟ್ಟಳಂತೆ. "

" ಮತ್ತಾರಮ್ಮ ಈ ಮಳೆಗಾಲದಲ್ಲಿ ಇದನ್ನೆಲ್ಲ ಮೂಸುವವರು. ಹಬ್ಬ ಹುಣ್ಣಿಮೆಗಳಾದರು ಬಂದರೆ ಸ್ವಲ್ಪ ಖರ್ಚಾಗುತ್ತದೆ. ಇಲ್ಲದಿದ್ದರೆ ಕೊಳೆತೇ ನಾರಬೇಕು. "

" ಇದೇನಮ್ಮ ಇಂದು ಬೆಳಗ್ಗೆ ಕಲ್ಲಿಟ್ಟಿರುವಿರಿ ? "

"ಮತ್ತೇನು ಮಾಡುವದಮ್ಮ. ಹೇಗಾದರೂ ಗೊತ್ತು ಹೋಗಬೇಕಲ್ಲ. ರಾಯರು ಹೇಗೂ ಇವತ್ತು ' ಕ್ಯಾಂಪಿಗೆ ' ತೆರಳಿದ್ದಾರೆ. ಇನ್ನು ಮರಳುವುದು ನಾಳೆ ಸಂಜೆಯಂತೆ. ಅಷ್ಟರವರೆಗೆ ಸಮಯ ದೂಡಬೇಕಲ್ಲ. ಹೇಗೂ ಅಷ್ಟಮಿ, ಹತ್ತಿರ ಬಂತು ನೋಡಿ. ಮಗ ಊರಿಗೆ ಬರುತ್ತೇನೆ ಅಂತ ಬರೆದಿದ್ದಾನೆ. ಮಗಳನ್ನೂ ಬಾ ಎಂದು ಕಾಗದ ಬರೆದಿರುವದು. ವರ್ಷಕ್ಕೊಂದು ದಿನ ಎಲ್ಲರೊಡನೆ ಉತ್ಸಾಹದಿಂದ ಕಳೆಯಬೇಕಲ್ಲ. "

" ಹೌದಮ್ಮ, ಒಂದು ದಿವಸಕ್ಕಾದರೂ ತಯಾರಾಗಬೇಕಲ್ಲ. ಒಬ್ಬರೇ ಇಷ್ಟನ್ನೆಲ್ಲ ತಯಾರು ಮಾಡಬೇಕು. "

" ಇಷ್ಟೆಲ್ಲ ಏನಮ್ಮ ? ನನ್ನ ಮನೇದ್ದು ನನಗೆ ಭಾರವಾಗುವುದಿದೆಯೇ? ಸಿಧಾನ ಆಗುತ್ತಾ ಇರುತ್ತದೆ. "

" ಆದರೂ....ನಾನು ಸ್ವಲ್ಪ ಹಿಡೀಲಾ ? ಮನೆಯಲ್ಲಿಯೂ ಒಬ್ಬಳೇ ಕುಳಿತುಕೊಳ್ಳಲು ಬೇಸರ. "

ಬೇಡಮ್ಮ."

"ನನಗೇನೂ ಕೆಲಸವಿಲ್ಲ. ರಾಯರು ಮನೆಯಲ್ಲಿಲ್ಲ. ಬೆಳಿಗ್ಗಿನ ಬಸ್ಸಿನಲ್ಲಿ ಮೈಸೂರಿಗೆ ಹೋದರು. ಇನ್ನೆರಡು ದಿನ ಬೇಸರವೆಂದರೇ ಬೇಸರ. ಮನೆಯಲ್ಲಾರೂ ಇಲ್ಲದಿದ್ದರೆ ಸಮಯ ಕಳೆಯುವುದೇ ಕಷ್ಟ. ಪಿಟೀಲು, ಹಾರ್ಮೋನಿಯಂ, ಸಂಗೀತ ಎಂದು ಎಷ್ಟೊತ್ತು ಕಳೆಯಬಹುದಮ್ಮ. ಅದಕ್ಕೂ ಉತ್ಸಾಹವಿರಬೇಕಲ್ಲ. ಬಾರಿಸುತ್ತಾ ಕುಳಿತಾಗ, ಕೇಳಿ ತಲೆ ದೂಗುವವರಿದ್ದರೆ ಆನಂದವಾಗುತ್ತದೆ. ಇಲ್ಲದಿದ್ದರೆ ಒಟ್ಟೂ ಬೇಸರ. ಇಲ್ಲಾದರೆ ನೀವಾದರೂ ಇದ್ದೀರಿ. ನೆರವಿಗೆ ಕೈ ಹಿಡಿದರೆ ಆಲಸ್ಯವೂ ಹೋಗುತ್ತದೆ; ಕೆಲಸವೂ ಸಾಗುತ್ತದೆ."

"ಬೇಡಮ್ಮ. ನಿಮಗೇಕೆ ಉಪದ್ರವ. ನೀವು ಸುಮ್ಮನೆ ಕುಳಿತಿರಿ. ನಾನೇ ಬೀಸುತ್ತೇನೆ."

"ಛೆ! ಇದಕ್ಕೆಲ್ಲ ಉಪದ್ರವವೆನ್ನುತ್ತಾರೇನಮ್ಮ? ಮನುಷ್ಯರು ಒಬ್ಬರಿಗೊಬ್ಬರು ಸಹಾಯಕರಾದರೆ ಚಂದವಲ್ಲವೆ? ಈಗ ನನಗೂ ಕೆಲಸವಿಲ್ಲ. ಇಲ್ಲದಿದ್ದರೆ ಇಲ್ಲಿಗಾರು ಬರುತ್ತಾರೆ? ಬಂದಲ್ಲೂ ಸುಮ್ಮನೆ ಕುಳಿತಿರುವುದು ನನಗೆ ಹಿಡಿಸದು. ಮನೆಯಲ್ಲೇ ಇದ್ದರೆ ಸುಮ್ಮನೆ ನಿದ್ರೆ ಮಾಡಬೇಕು. ಅದರಿಂದಲೂ ಮತ್ತೆ ಜಡ ತಪ್ಪಿದ್ದಲ್ಲ."

ತಾರಾ ಮಾತಾಡುತ್ತಲೇ ಕಲ್ಲಿಗೆ ಕೈಹಿಡಿದಳು. ಕಲ್ಲು ಚಕ್ರಾಕಾರವಾಗಿ ತಿರುಗುತ್ತಲೇ ಇತ್ತು. ಮೊದಲೊಂದು ತಲೆ ಅಲ್ಲಾಡುತ್ತಿದ್ದಲ್ಲಿ ಈಗಿನ್ನೊಂದು ತಲೆ ಅದಕ್ಕೆ ತಾಳ ಹಾಕಲಾರಂಭಿಸಿತು. ಗರಗರ ಶಬ್ದದೊಂದಿಗೆ ಕಣ್ಣು ತಪ್ಪಿ ಬಿದ್ದಿದ್ದ ಒಂದೆರಡು ಕಲ್ಲುಗಳು 'ಕಟ್ ಕಟ್' ಎಂದು ತುಂಡಾಗಿ ಹೋದುವು. ಶಾಂಭವಿ ಮತ್ತೆ ತುಟಿ ಬಿಚ್ಚಲಿಲ್ಲ. ತಾರಳೂ ಕಲ್ಲ ಗುಳಿಯಲ್ಲಿ ತಾಂಡವ ನೃತ್ಯಗೈಯುತ್ತಿದ್ದ ಒಂದೆರಡು ಗಾಳುಗಳನ್ನೇ ದಿಟ್ಟಿಸುತ್ತಾ ಮೌನಳಾಗಿದ್ದಳು.

ದಿಟ್ಟಿಸುತ್ತಿದ್ದ ತಾರಳ ಕಣ್ಣುಗಳು ಮಂಜಾದುವು. ಕಲ್ಲಗುಳಿಯು ವಿಶಾಲ ಶರಧಿಯಂತೆ ತೋರಿಬಂತು. ಕಲ್ಲಿನ ಮೇಲ್ಭಾಗವು ಶರಧಿಯನ್ನಂಟಿಕೊಂಡಿದ್ದ ಮಳಲ ದಿಣ್ಣೆಯಂತೆ ಭಾಸವಾಯಿತು. ಮಧ್ಯದಲ್ಲಿ ಹಾರಿ, ಹಾರಿ ಬೀಳುತ್ತಿದ್ದ ಕಾಳುಗಳು ಸಮುದ್ರ ಮಧ್ಯದಿಂದ ಭೋರ್ಗರೆದು ಹರಿ

ಯುವ ಅಲೆಗಳು ಬಂದು ದಂಡೆಗೆ ಅಪ್ಪಳಿಸುವಂತೆ ತೋರಿದುವು. ಒಡೆದು ಹುಂಡಾದ ಕಾಳಿನ ಚೂರುಗಳು ಗಾಳಿಯಿಂದ ಮೇಲೆ ಹಾರಿ ಪುನಃ ಕೆಳಜಾರಿ ಕಲ್ಲೆಡೆಯಲ್ಲಿ ಸಿಕ್ಕಿಕೊಂಡಾಗ, ಸಮುದ್ರ ಮಧ್ಯದಲ್ಲಿ ಬಿದ್ದಿದ್ದ ತೆಂಗಿನ ಕಾಯಿಯೊಂದು ತೆರೆಗಳ ಸಳೆತಕ್ಕೆ ಬಿದ್ದು ದಂಡೆಗೆ ಬಂದು, ನೆಲೆ ಕಂಡು, ಪುನಃ ತೆರೆಯೊಂದಿಗೆ ಹಿಂತಿರುಗಿ ನೆಲೆಯಿಲ್ಲದಲ್ಲಿಗೆ ಸಾಗಿ, ಕಂಗಾಲಾಗಿ ಮುಳುಗುಗೊಳ್ಳುವಂತೆ ತೋರಿಬಂದಿತು ಈ ವಿಚಿತ್ರ ಭಾವನೆಯು ಆಕೆ ಯಲ್ಲೊಂದು ಕ್ರಾಂತಿಯನ್ನೆಬ್ಬಿಸಿ, ತನ್ನ ಜೀವನದ ಬಣ್ಣಗಳನ್ನು ಮರುಕಳಿ ಸಿತು. ತಡೆಯಲಾರದ ಹೃದಯ, ಬಿಸಿಯಿಂದ ಉಕ್ಕೇರಿದ ನಿಟ್ಟುಸಿರೊಂ ದನ್ನು ಬಿಸುಸುಯ್ಯಿತು.

"ಏನಮ್ಮ, ಏನಾಲೋಚಿಸುತ್ತಾ ಮರುಗಿದಿರಿ ?"

"ಏನ್ಹೇಳಲಿ. ಅದೆಲ್ಲ ನನ್ನ ಬಾಳಿನ ಅದೃಷ್ಟ ಚಿತ್ರಗಳು. ಹಿಂದಿನ ಕಹಿ ನೆನಹುಗಳಾದುವು ಅಷ್ಟೆ."

"ಏನದು, ಅಷ್ಟು ಕಹಿ? ಅಷ್ಟೊಂದು ಕಹಿಯನ್ನೂ ಈ ಇಳಿ ಪ್ರಾಯದಲ್ಲೇ ಸವಿದಿರುವಿರಾ ?"

"ಸಿಹಿ-ಕಹಿಗಳಿಗೆಲ್ಲ ಚಿಕ್ಕ-ದೊಡ್ಡತನವಿದೆಯೆ ? ಚಿಕ್ಕಂದಿನಲ್ಲಿ ಕಹಿ ಸವಿದರೇನೇ ಈಗ ಸಿಹಿ ತಿನ್ನಬಹುದು ಎಂದು ತೋರುತ್ತದೆ."

"ಹಾಗಲ್ಲ. ನಿಮ್ಮ ಇಂದಿನ ಸೌಭಾಗ್ಯವನ್ನು ಕಾಣುವಾಗ ಆ ಕಹಿಯ ಚಿಹ್ನಗಳೇ ತೋರಿಬರುವುದಿಲ್ಲವಲ್ಲ."

"ಇಂದಿನ ತೋರಿಕೆಗೆ ಅದೆಲ್ಲವೂ ಮುಚ್ಚಿಕೊಂಡಿದ್ದರೂ ಮನಸ್ಸು ಮುಚ್ಚಿಕೊಳ್ಳಲಾರದೆ ಹೋಗಿದೆ. ಅಂತಿದೆ ಅದರ ದುಸ್ತರ!"

"ಹಾಗಾದರೆ ಅದರ ಸವಿಯನ್ನು ನನಗೂ ಅರುಹಬಾರದೆ ?"

"ಹೇಳಿಯಾದರೂ ಏನು ಪ್ರಯೋಜನವಮ್ಮ."

"ಹೇಳಿ ಪ್ರಯೋಜನವಿಲ್ಲದಿದ್ದರೂ ಹೃದಯ ಭಾರವನ್ನು ಸ್ವಲ್ಪ ವಾದರೂ ನೀಗಿದಂತಾಗುವುದಲ್ಲದೆ, ನಾನೂ ಸ್ವಲ್ಪ ತಿಳುವಳಿಕೆಯನ್ನು ಪಡೆದಂತಾಗುವುದಲ್ಲವೆ ?"

"ಏನು ಬುದ್ಧಿಯೋ, ಅಂತಹ ಹುಚ್ಚು, ಮನುಷ್ಯನಾದವನ ತಲೆ ಯಲ್ಲಿ ಹೊಳೆಯಲೇ ಬಾರದು"

" ಅಷ್ಟೊಂದು ಹೀನ ಸ್ಥಿತಿಯೇ ! ಹೌದಮ್ಮ, ಕಷ್ಟಗಳು ಮನುಷ್ಯನಿಗೆ ಬಾರದೆ ಕಲ್ಲು ಮರಗಳಿಗೆ ಬರುತ್ತದೆಯೇ ? ಕಷ್ಟ ಸುಖಗಳು ಮನುಷ್ಯನಿಗೆ ಕಟ್ಟಿಕೊಟ್ಟ ಬುತ್ತಿ. ಅದರಲ್ಲೂ ಹೆಣ್ಣಾದವಳಿಗೆ ಹುಟ್ಟಿದಂದಿನಿಂದ ಕಷ್ಟ ತಪ್ಪಿದ್ದೆಂದಿಲ್ಲ. ಕೆಲವರಿಗೆ ಬಹಳ ಕಠಿಣದ ಕಷ್ಟ ಬರುತ್ತದೆ. ಇನ್ನೂ ಕೆಲವರು ತಮಗೆಷ್ಟು ಕಷ್ಟ ಬಂದರೂ ತಾಳ್ಮೆಯಿಂದ ಎದುರಿಸಿ, ಜಯಿಸಿ ಬಿಡುತ್ತಾರೆ. ನೀವಾವ ಕಷ್ಟಕ್ಕೆ ಒಳಗಾಗಿದ್ದಿರಮ್ಮ ? "

" ನನಗೆ ಬಂದುದು ಕಷ್ಟವಲ್ಲ. ನನ್ನ ಹೆಡ್ಡತನ. "

" ಹಾಂ. "

" ಹೇಳಬಾರದಮ್ಮ ಅದು. ನನ್ನ ಕತೆ....ಅದೊಂದು ಭ್ರಷ್ಟತನ. ಈ ಕಲ್ಲ ಮಧ್ಯೆ ಬಿದ್ದು ನುಚ್ಚುನೂರಾಗುತ್ತಿರುವ ಕಾಳಿನಂತಹ ಅವಸ್ಥೆ. ನಜ್ಜು ಗುಜ್ಜಾಗಿ ಜಜ್ಜಿ ಹೋದ ಬಾಳುಗೋಳಿನ ಕತೆ. ಕತೆ ಕೇಳಿದ ನಿಮಗೆ ಸಹನೆ ತಪ್ಪೀತು. ನಾನು ವೇಶ್ಯೆ ಎಂದು, ನನ್ನ ಜೀವನ ವೇಶ್ಯಾವೃತ್ತಿಯದೆಂದು ತುಚ್ಛೀಕರಿಸುವಿರಿ ! ತಾರ ಇಂಥವಳೇ ಎಂದು ನಿಮಗೆ ನೀವೇ ದಂಗಾಗು ವಿರಿ !! ಆದರಿಂದ ಆದಕ್ಕಾಗಿ ನನ್ನನ್ನು ಪೀಡಿಸಬೇಡಿರಿ. ನೀವೂ ಸುಮ್ಮನೆ ಅಸಹ್ಯಪಡುವುದು ಬೇಡ. "

" ಬದುಕು ಬಾಳಿನಲ್ಲಿ ಹೆಡ್ಡತನ, ದಡ್ಡತನ ಇದ್ದೇ ಇರುತ್ತದೆ. ಎಲ್ಲವೂ ಕಾಲಮಹಿಮೆ ಎನ್ನಬೇಕು. 'ಸೂಳೆ' ಎಂಬುದೇನು ಮಾನವನಿಂದ ನಿರ್ಮಿತವಾಗುವುದಿಲ್ಲ. ಎಲ್ಲವನ್ನೂ ದೇವಾಧಿದೇವನು ಮಾನವನಿಂದ ಮಾಡಿಸುವುದು. ಜೀವನದ ಹೋರಾಟವದು. ಇಂದಿದ್ದ ಗೃಹಿಣಿ ನಾಳೆ ನಗರದ ವೇಶ್ಯೆಯಾಗಬಹುದು. ವೇಶ್ಯೆಯು ಗೃಹಿಣಿಯಾಗಬಹುದು. ಇದೆಲ್ಲ ಜೀವನದ ಸೃಷ್ಟಿಲಯಗಳು, ದೇವನಿಯೋಜಿತ ಕಾರ್ಯಗಳು; ವಿಧಿಯ ವಿಕಟಾಟ್ಟಹಾಸವದು. ಈಗ ನೀವು ಹೇಗೂ ನನ್ನ ನೆರವಿಗೆ ಬಂದಿರುವಿರಿ. ಬೀಸುತ್ತ ಬೀಸುತ್ತ ದಣಿವಾಗುತ್ತದೆ. ನಿಮ್ಮ ಆ ಕತೆ ಕೇಳುತ್ತಾ ಇದ್ದರೆ ದಣಿವು ಬೇಸರ ಒಂದೂ ಆಗಲಾರದು. ಅಲ್ಲದೆ ನಾನೊಂದು ಸತ್ಯ ಕಥೆ ಯನ್ನು ಅರಿತಂತಾಗುವುದು. ಹೇಳಿ ಬಿಡಿ. ಮತ್ತೆ ನಿಮ್ಮ ಮನಸ್ಸಿಗೆ ಬರೆ ಎಳೆದಂತಾಗುವುದಾದರೆ ಹೇಳುವುದೇ ಬೇಡ. ನಿಮಗೇಕೆ ವೃಥಾ ಬೇಸರ ?"

" ಬೇಸರವೇನಮ್ಮ ? ನಾನದನ್ನು ಬಚ್ಚಿಟ್ಟುಕೊಂಡು ಇನ್ನು ಗುಡ್ಡೆ

ಹಾಕುವುದಾದರೂ ಏನು ? ಕೆಲವೊಮ್ಮೆ ಕೊಂಚ ಸಂಕೋಚವೇ ಆಗು ತ್ತದೆ. ”

“ ನಡೆದುದರಲ್ಲಿ ಇನ್ನೇಕೆ ಸಂಕೋಚ ? ಜೀವನ ನೌಕೆಯನ್ನು ಸುಗಮವಾಗಿ ಹರಿಯಿಸಬೇಕಾದರೆ, ಎಷ್ಟೋ ಗಾಳಿಯ ಹೊಡೆತವನ್ನು ಎದುರಿಸಬೇಕಾಗುತ್ತದೆ. ಆದರೂ ಸುಖವಾಗಿ ದಡ ಮುಟ್ಟಿಯೇನು ಎಂದು ಮಾನವನ ಹಿರಿಯಾಸೆ. ಅದಕ್ಕಾಗಿ ಅವನು ತನ್ನ ತನು-ಮನ-ಧನ ವನ್ನು ಮುಡಿಪಾಗಿಟ್ಟು ತೊಳಲಾಡುತ್ತಾನೆ. ಆದರೆ ವಿಧಿ ನಿಯಮ— ಜಟಿಲ ಗಂಡಾಂತರಗಳು ಬೆನ್ನಟ್ಟಿ ಬರದಿರುವುವೇ ? ಒಂದು ಗಂಡಾಂತರ ಮುಗಿಯಿತು, ಇನ್ನೇನು ಸುಖ ಎಂದು ಆಲೋಚಿಸುವದರೊಳಗೆ ಇನ್ನೊಂದು ಉದ್ಭವಿಸಿಯೇ ಬಿಡುತ್ತದೆ. ಅದರ ಪರಿಹಾರಕ್ಕಾಗಿ ಮಾನವನು ಎದೆ ಗೊಟ್ಟು ನಿಂತು ಅದರೊಂದಿಗೆ ದ್ವಂದ್ವಯುದ್ಧಗೈದು ಜಯ ಹೊಂದುವುದೇ ಕಷ್ಟ ! ಅದೇ ಜೀವನದ ಆಂತರಿಕ ಗುಟ್ಟು. ಅಂತಹ ಹೋರಾಟದಲ್ಲಿ ಯಶಸ್ವಿಯಾಗಿ ಮುನ್ನಡೆಯಬೇಕೆಂದು ಹಂಬಲವಿದ್ದರೆ ಮಾನವನಲ್ಲಿ ಮನಃ ಸ್ಥೈರ್ಯವಿರಬೇಕು; ತಾಳ್ಮೆಯಿರಬೇಕು.”

ತಾರಳ ಮುಖವು ಜೋಲು ಬಿದ್ದಿತು. ದುಃಖಾಶ್ರುಗಳು ಆಕೆಯ ಅರೆತೆರೆದ ಕಣ್ಣೆವೆಗಳಿಂದ ಬಿಂದುಬಿಂದುವಾಗಿ ಹೊರಹೊರಟುವು. ಬಿಡು ವಾಗಿದ್ದ ಬಲಗೈಯು ಯಾಂತ್ರಿಕವಾಗಿ ಸೆರಗಿನ ತುದಿಯಿಂದ ಎರಡೂ ಕಣ್ಣುಗಳನ್ನು ಒರಸಿತು. ತನ್ನ ಜೀವನದಲ್ಲಿ ನಡೆದ ಹೇಯಕೃತ್ಯಗಳನು ಆನಂದದಾಯಕ ಸಮಯದಲ್ಲಿ ಆ ಸಾತ್ವಿಕಳ ಮುಂದೆ ತೋಡಿಕೊಂಡು ಮೂರ್ಖಳೆನಿಸಲೋ ಬಿಡಲೋ ಎಂಬ ಪ್ರಶ್ನೆ ಆಕೆಯ ಮನದಲ್ಲಿ ದ್ವಂದ್ವ ವಾಡತೊಡಗಿತು. ಮತ್ತೊಂದು ಕ್ಷಣದಲ್ಲಿ ಮಗದೊಂದು ಆಲೋಚನೆಯು.... ತನ್ನ ಬಾಳನೌಕೆಯು ಹಲವಾರು ಘೋರ ಬಿರುಗಾಳಿಗಳ ಸೆಳೆತಕ್ಕೆ ಸಿಕ್ಕಿ ನುಚ್ಚುಗೊಳ್ಳಲಿದ್ದರೂ ಸಂದರ್ಭ ವಶಾತ್ ಆಸರೆ ಪಡೆದು ಜಯಶೀಲ ವಾದಂತೆ ವಿಜಯ ಪತಾಕೆಯನ್ನು ಹಾರಿಸಿ, ನಲ್ಮೆ ಪಡೆದಿರುವ ಅಭಿಪ್ರಾಯ ವನ್ನು ವ್ಯಕ್ತಗೊಳಿಸಿರುವಾಗ ಆ ಬಿರುಗಾಳಿಗಳಾವುವು ಎಂದು ಅರುಹ ದಿದ್ದರೆ, ಶಾಂಭವಿಯು ಸುಮ್ಮನಿರುವಳೆ ? ಎಂದಂದುಕೊಂಡಳು. ತಾರಳಿ ಗೀಗ ಕುದಿಯುತ್ತಿರುವ ಹಾಲನ್ನು ಬಾಯೊಳಗೆ ಸುರಿದಂತಾಯಿತು. ಅತ್ತ

ಕಥೆ ಅರುಹಿದರೆ ಅವರಾವ ಭಾವನೆಯನ್ನು ತಾಳುವರೋ ಎಂಬ ವ್ಯಥೆ. ಇತ್ತ ಹೇಳದೆ ಸುಮ್ಮನಿರುವಾ ಎಂದರೆ........ನನ್ನ ದುಃಸ್ಥಿತಿ ಎಲ್ಲವೂ ಬಯಲಾಗುವುದು. ಮುಚ್ಚಿಟ್ಟು ಕುಳಿತಿದ್ದರೆ........ ಏನೇನೋ ಅಸಹ್ಯ ವರ್ತನೆಗೈದು, ಪಾಪ ಕೂಪದಲ್ಲಿ ಹೊರಳಾಡಿ, ಇಂದದನ್ನು ಬಚ್ಚಿಡಲು ಪ್ರಯತ್ನಿಸುತ್ತಾಳೆ ಎಂದು ಅವರು ಅಭಿಪ್ರಾಯಪಡುವರು. ಮುಂದಕ್ಕೆ ತನ್ನನ್ನು ತುಚ್ಛೀಕರಿಸಿ, ಕಡೆಗಣ್ಣಿಂದ ನೋಡದಿರಲಾರರು. ಅಂತೂ ತಾರಳು ಉಭಯ ಸಂಕಟದಲ್ಲಿ ಬಿದ್ದು ಏನೇನೋ ಆಲೋಚಿಸತೊಡಗಿದಳು.

## ೨

ಉಭಯ ಸಂಕಟೋನ್ಮತ್ತಳಾದ ತಾರೆ, ಜೀವನದ ಝುಂಝಾ ವಾತಾವರಣದಿಂದ ರಕ್ಷಣೆ ಹೊಂದಿ ಕತೆಯನ್ನು ಹೇಳಿಕೊಳ್ಳುವ ನಿರ್ಣಯಕ್ಕೆ ಬಂದಳು. ತಾನು ಎಷ್ಟೊಂದು ಕಷ್ಟ ಬಂದರೂ ಧೈರ್ಯದಿಂದ ಮುನ್ನುಗ್ಗಿ ಎದುರಿಸಿ ಜಯ ಹೊಂದಿರುವೆನು. ಹಾಗಿರುವಾಗ ತನ್ನ ಆತ್ಮೀಯಳೆನಿಸಿದ ಶಾಂಭವಿಯಲ್ಲಿ ಅದನ್ನು ನಿವೇದಿಸಿದರೆ ಅದರಿಂದೇನು ಹಾನಿಯಿದೆ ಎಂದಂದುಕೊಂಡಳು. ಆದರೆ ಬರೀ ಕ್ಷಣಿಕ ನಾಲ್ಕು ದಿನದ ಅಮಿತ ಸುಖದಾಸೆಯಿಂದ ಅನ್ನವಿಕ್ಕಿದ ಉದಾರಿ ಎಂಬ ಭಾವನೆಯಿಂದ ಅವನ ಮನೋಭಿಲಾಷೆಯನ್ನು ನೆರವೇರಿಸಿ ಅವನಿಗೆ ದೇವರೇ ಎಂಬ ಅಭಿಮಾನದಿಂದ ದೇಹವನ್ನೇ ಅರ್ಪಿಸಿದರೂ ಕಡೆಗೆ ಅವನು ತನ್ನನ್ನು ಹೋಗೆಂದು ದೂಡಿದ್ದನ್ನೂ ತಿಳಿಸಿದರೆ, ತನ್ನನ್ನು ತುಚ್ಛೀಕರಿಸದಿರುವರೆ ? ಆದರೆ, ಈಗ ಏನೋ ಅಡಿಗಲ್ಲಿಂತಹ ಉತ್ತರವನ್ನಿತ್ತು ಇನ್ನು ಗೃಹ ಕಟ್ಟಿದಿದ್ದರೆ ಅದೂ ಒಂದು ಹೀನ ಎಂದೆಣಿಸದಿರುವರೆ ? ತನ್ನ ವೃತ್ತಾಂತವನ್ನೆಲ್ಲಾ ತಿಳಿಯಲು ಆತುರಳಾಗಿರುವ ಶಾಂಭವಿಗೆ ತಾರೆ ತನ್ನ ಬಾಳಿನ ಗೋಳಿನ ಕತೆಯನ್ನು ಅರುಹಿ ಶಾಂತಳಾಗಿ ಮಾಡಲು ಮೊದಲು ಮಾಡಿದಳು.

“ನನ್ನ ಜನನ ಉಡುಪಿಯಲ್ಲಿ. ನನ್ನ ಹೆತ್ತವರು ಹೆಚ್ಚು ಶ್ರೀಮಂತರಲ್ಲದಿದ್ದರೂ ಹೊಟ್ಟೆ ಹೊರೆದುಕೊಳ್ಳುವಷ್ಟು ಹೊಲಮನೆಗಳಿದ್ದುವು ಅವರಿಗೆ.

ಅವರು ಬಹಳ ಕಷ್ಟದಿಂದಲೇ ಸಂಸಾರ ನಡೆಸುತ್ತಿದ್ದರು. ಬೇರೆ ಯಾರ ಮಕ್ಕಳೂ ನಮ್ಮ ಮನೆಯಲ್ಲಿಲ್ಲವಾದುದರಿಂದ ನಾನೇ ನನ್ನ ತಂದೆಗೆ ಮಗ-ಮಗಳಾಗಿದ್ದೆ. ನನ್ನನ್ನು ಅವರು ಬಹಳವಾಗಿ ಪ್ರೀತಿಸುತ್ತಿದ್ದರು. ಫಲವಾಗಿ ನನ್ನನ್ನು ಚೆನ್ನಾಗಿ ಓದಿಸಿ ವಿದ್ಯಾವತಿಯನ್ನಾಗಿ ಮಾಡಿ, ಯೋಗ್ಯ ವರನಿಗೆ ಧಾರೆಯೆರೆದು, ಮಗಳ ಸುಖಜೀವನವನ್ನು ಕಂಡು ಆನಂದಿಸಬೇಕೆಂಬ ಅವರ ಆಕಾಂಕ್ಷೆಯಿದ್ದಿತು. ಆಮೇರೆಗೆ ಅವರ ಕನಸು ನನಸಾಗಿ, ನಾನು ಮೆಟ್ರಿಕ್ ತನಕ ನಿರಾತಂಕವಾದ ಜೀವನವನ್ನು ತಳ್ಳುತ್ತ ಬಂದೆ. ನನಗಾಗಿ ವರಾನ್ವೇಷಣವು ಇದರೆಡೆಯಲ್ಲೇ ನಡೆಯುತ್ತಲಿತ್ತು. ನಮ್ಮ ಕುಟುಂಬ ಬಡ ಜೀವನದ ಸರಹದ್ದಿನದಾದುದರಿಂದ ಮುಂದರಿದು ಬರುವ ವರನೇ ದುರ್ಲಭನಾಗಿದ್ದನು. ಬಡತನದಲ್ಲೂ ಹೊಟ್ಟೆ ಬಾಯಿ ಕಟ್ಟಿ, ಕೊಡಿಸಿದ ವಿದ್ಯೆ ಅಂದು ಪ್ರಯೋಜನವಿಲ್ಲದೆ ಹೋಯಿತೆಂದು ತಂದೆ ಮರುಗಿದರು. ವಿವಾಹವಾಗುವ ಕುಮಾರರಿಗೆ ಯುವತಿಯಲ್ಲಿ ಕೂಡಿರುವ ವಿದ್ಯೆ, ಬುದ್ಧಿ, ರೂಪ, ಗುಣಗಳು ಬೇಕೆ? ಬೇಡ, ಅವರಿಗೆ ಬೇಕಾದುದು ಹಣ! ಇದಕ್ಕೂ ಕಾರಣ ಮದುವೆಯಾಗುವವರಲ್ಲ; ಸಿರಿ ತುಂಬಿ ತುಳುಕುತ್ತಿರುವ ಸಿರಿವಂತರೆನ್ನಬೇಕು. ಏಕೆಂದರೆ ಮನೆಯಲ್ಲಿ ಬೆಳೆದ ಹಲವಾರು ಹೆಣ್ಣುಗಳು ತುಂಬಿರುವಾಗ, ಊರವರ ಬಿರುನುಡಿಗಳನ್ನು ದೂರೀಕರಿಸಲೋಸುಗ ಮದುವೆಗೆ ಮುಂಬಂದ ಯಾವನೇ ಪೆದ್ದನಿಗಾದರೂ ವರದಕ್ಷಿಣೆಯ ಮೂಟೆ ಕಟ್ಟಿ, ಅವನ ಮನವೊಲಿಸಿ ಹುಡುಗಿಯನ್ನು ಕುತ್ತಿಗೆಗೆ ಕಟ್ಟುತ್ತಿರುವಾಗ ನಮ್ಮಂಥ ಬಡವರ ಪಾಡಾದರೂ ಏನು? ವರದಕ್ಷಿಣೆಯ ಸುದ್ದಿ ನಮ್ಮ ತಂದೆಯವರ ಕಿವಿಗೆ ಬಿದ್ದೊಡನೆ ಕಂಗಾಲಾಗುತ್ತಿದ್ದರು. ಕಡೆಗೆ ಒಂದೆರಡು ಎರಡನೆಯ ಸಂಬಂಧದ ವಿಧುರರು, ಕೆಲವು ದಂಟೆ ಹಿಡಿದ ಅಜ್ಜಂದಿರು ನನ್ನ ಕೊರಳು ಕೊಯ್ಯಲು ಮುಂದಾದರು. ನಾನು ಅವರ ಮೋಸದ ಬಲೆಗೆ ಬಿದ್ದೇನೇ? ತಂದೆಯವರೇನೋ ಹುಚ್ಚು ಕಲ್ಪನೆಯಿಂದ ಮುಂದು ವರಿಸುವಾ ಎಂದರು. ಅವರಿಗಾಗ ಊರವರ ಬಿರಿನುಡಿಗಳಿಂದೊಮ್ಮೆ ಪಾರಾಗುವ ಎಂದು ತೋರುತ್ತಿತ್ತು. ಊರ ಮಹನೀಯರೆಲ್ಲ ಎಂತಹ ವರಮ್ಮ, 'ಮನೆಯಲ್ಲೇಕೆ ಬೆಳೆದ ಹೆಣ್ಣನ್ನಿಟ್ಟು ಪೂಜಿಸುತ್ತಿರುವಿರಿ? ಗಂಡ ಸಿಗಲಿಲ್ಲ ಎಂದು ಸುಮ್ಮನೆ ಕುಳಿತರಾಗುವದೆ? ಯಾರೂ ದೊರೆಯದಿದ್ದರೆ

ಎಲ್ಲಿಯಾದರೂ ವಿಧುರನಿಗೆ ಧಾರೆ ಎರೆಯಬಾರದೆ ? ಎಂದು ಅನೇಕರು ನನ್ನ ತಂದೆಗೆ ಸಲಹೆಯನ್ನಿತ್ತಿದ್ದರಂತೆ. ಮುಂದಿನ ದಾರಿಯಾವುದೆಂದು ನಿರ್ಣಯಿಸಲು ತಂದೆಯವರು ನನ್ನನ್ನೇ ಕೇಳಿದರು. ಅಂತಹ ಎರಡನೆ ಸಂಬಂಧವನ್ನು ಎಂದೂ ಒಪ್ಪಲಾರೆನೆಂದು ತಿಳಿಸಿದೆ. ತಂದೆಯವರ ಕಾಲು ಹಿಡಿದು ಕಣ್ಣೀರ ಕೋಡಿ ಹರಿಸಿ, ನನಗೆ ಮುಂದಿನ ವಿದ್ಯೆಯನ್ನು ದಯಪಾಲಿಸಬೇಕೆಂದು ಬೇಡಿದೆ. ಆ ಸಮಯದಲ್ಲಿ ನನ್ನ ಪರೀಕ್ಷೆಯ ಫಲಿತಾಂಶವೂ ಬಂತು. ನಾನು ಒಳ್ಳೆಯ ಮಾರ್ಕ್ಸ್ ಪಡೆದಿದ್ದುದರಿಂದ ನನಗೆ ಆನಂದವಾಯಿತು. ಇತ್ತ ಮದುವೆ ನಿರ್ಣಯವೂ ನಡೆಯದ ಕಾರಣ, ಒದಗಿಬಂದ ಸುಸಂಧಿಯನ್ನು ತೊರೆಯಬಾರದೆಂಬ ಬಯಕೆಯಿಂದ ತಂದೆಯವರೊಡನೆ ನನ್ನನ್ನು ಕಾಲೇಜಿಗೆ ಕಳುಹಿಸಬೇಕೆಂದೂ ನಂತರ ಉತ್ತಮ ವರನು ತಾನಾಗಿಯೇ ಮುಂದೆ ಬರುವನೆಂದೂ ಅವರನ್ನು ಬೇಡಿದೆ. ನನ್ನ ಪ್ರಯತ್ನವು ವಿಫಲವಾಗದ ರೀತಿಯಲ್ಲಿ ಅವರನ್ನು ಹುರಿದುಂಬಿಸಿ ಕಾಲೇಜಿಗೆ ಕಳುಹಿಸಿ ಕೊಡುವಂತೆ ಕಾಡಿದೆ.” ತಾರಾ ತನ್ನ ಬಾಳ ಚಿತ್ರವನ್ನು ಮೊಗಕುಂಚದಿಂದ ಚಿತ್ರಿಸತೊಡಗಿದಳು. ಶಾಂಭವಿ ಹೂಂಗುಡುತ್ತ ಕಲ್ಲಸೇವೆಯಲ್ಲೇ ನಿರತರಾಗಿದ್ದರು.

“ನಾನು ವಿದ್ಯಾಭ್ಯಾಸ ಮುಂದರಿಸಲು ಕಾಲೇಜು ಸೇರುವೆನೆಂದಿದ್ದೆನಷ್ಟೆ. ಆದರೆ ತಂದೆಯವರಿಗೆ ಇದ್ದ ಬಡತನದ ಮಧ್ಯೆ ಇನ್ನೊಂದು ಹೊರೆಯನ್ನು ಹೊತ್ತುಕೊಳ್ಳಲು ಮನಸ್ಸಿರಲಿಲ್ಲ. ಬದಲಾಗಿ ಟ್ರೈನಿಂಗಿಗೆ ಹೋಗಿ ಟೀಚರ್ ಆಗು ಎಂದು ಪ್ರೇರೇಪಿಸಿದರು. ನನಗದು ಮೆಚ್ಚಲಿಲ್ಲ. ಅದಕ್ಕೆಲ್ಲ ಕಾರಣ ನನ್ನನ್ನು ಬೆಂಬತ್ತಿದ ವಿಧಿ ಎನ್ನಬೇಕು. ಅಂದು ಟ್ರೈನಿಂಗಿಗೆ ಹೋಗುತ್ತಿದ್ದರೆ ಇಷ್ಟೆಲ್ಲ ಕಷ್ಟಪಡುವ ಅಗತ್ಯವಿರಲಿಲ್ಲ. ಎಲ್ಲಾದರೂ ಶಾಲೆ ಸೇರಿ ಉಪಾಧ್ಯಾಯಿನಿಯಾಗಿ, ಯಾರ ಅಡ್ಡಿ ಆತಂಕವಿಲ್ಲದೆ ನನ್ನ ಜೀವನ ಸಾಗಿಸಬಹುದಾಗಿತ್ತು. ಆದರೆ ಈಗ ಹಾಗೆ ನೆನಸಿದ್ದರೂ, ಆ ಕೆಲಸ ನನ್ನಿಂದ ಅಸಾಧ್ಯವೆಂಬುದು ನನ್ನ ಅನುಭವಕ್ಕೆ ಮತ್ತೊಮ್ಮೆ ಬಂದುಬಿಟ್ಟಿತ್ತು. ಕಾಲೇಜಿನ ಹಟ ಹಿಡಿದು ವಿದ್ಯೆ ಕೊಡಿಸಿ ಎಂದು ಮತ್ತೂ ಮತ್ತೂ ಅವರನ್ನು ಒತ್ತಾಯಿಸಿದೆ. ‘ಸಿರಿತನವಿಲ್ಲದಿದ್ದರೂ ವಿದ್ಯೆಯೇ ಬಡವನ ಸೊತ್ತು’ ಎಂಬ ಆಶೆ ಆಗ ನನಗಿತ್ತು. ಇದೆಲ್ಲ ಬೋಧನೆಗಳಾದ ನಂತರ ತಂದೆಯವರಿಗೂ

ಮಗಳು ಕಲಿಯಲಿ ಎಂದು ತೋರಿತೋ ಏನೋ, ಮುಂದೆ ಕಲಿಸಲು ಪ್ರಯತ್ನಿಸುವೆನು ಎಂದರು.

"ನನ್ನ ಹಟವೇ ಗೆದ್ದಿತು. ನಾನು ಆನಂದದ ಗದ್ದುಗೆ ಏರಿದೆ. ಕಾಲೇಜು ಸೇರಬೇಕಿದ್ದರೂ ನಮ್ಮೂರಲ್ಲಿ ಅದಕ್ಕೆ ಎಡೆಯಿರಲಿಲ್ಲ. ಅಲ್ಲಾವ ಕಾಲೇಜೂ ಇಲ್ಲದ ಕಾರಣ ಪ್ರತಿಯೊಬ್ಬನೂ ಮಂಗಳೂರ ಹಾದಿಯನ್ನೇ ಹಿಡಿಯಬೇಕಿತ್ತು. ಅಲ್ಲೂ ಸೀಟಿಗಾಗಿ ಹೊಡೆದಾಟಗಳೇ ನಡೆಯುತ್ತವೆ. ಸುಲಭದಲ್ಲಿ ಸೀಟು ದೊರೆಯುವದೆಂದರೆ ಗವರ್ನ್‌ಮೆಂಟ್ ಕಾಲೇಜಿನಲ್ಲಿ ಮಾತ್ರ. ಮತ್ತೆ ಮಿಕ್ಕುಳಿದ 'ಕಾನ್ವೆಂಟ್'ಗಳಿಗೆ ಹೋಗಿ ನಮ್ಮಂಥ ಹಳ್ಳಿಯ ಹುಡುಗಿಯರು ಕಲಿಯುವುದೆಂದರೆ ಭಗೀರಥ ಪ್ರಯತ್ನವೇ ಸರಿ. ಅದರಲ್ಲೂ ಅರಿವಿಲ್ಲದ ಊರು ಸೇರಿ, ಹಾಸ್ಟೇಲಿನಲ್ಲಿ ಉಳಕೊಂಡು ಕಲಿಯುವುದೆಂದರೆ ಉಭಯ ಸಂಕಟವೇ ಸರಿ! ಕಲಿಯಲು ಪಣ ತೊಟ್ಟ ನಾನು ಪರಿಹಾರ ಕಾಣದೆ, ಸರಕಾರಿ ಕಾಲೇಜಿಗೆ ಶರಣು ಹೋಗಿ, ಒಂದು ಹಾಸ್ಟೇಲನ್ನೇ ಸೇರಿಬಿಟ್ಟೆ.

"ಕಾಲೇಜು, ವಿದ್ಯಾಭ್ಯಾಸ ಮೊದಮೊದಲು ನನಗೆ ವಿಚಿತ್ರವಾಗಿಯೇ ಕಂಡಿತು. ಹಳ್ಳಿಯ ಕತ್ತೆ ನಾನು, ಪೇಟೆಯ ಕುದುರೆಗಳನ್ನು ಕಂಡು ನಾಚುವಂತಾಯಿತು. ಆದರೂ ನನ್ನ ಮನಸ್ಸು ವಿದ್ಯೆಯಲ್ಲೇ ಹೆಚ್ಚಾಗಿ ಹುದುಗಿಕೊಂಡುದರಿಂದ ಇತರ ಮೋಹಕ ವರ್ತನೆಗಳಿಗೆ ಒಳಗಾಗಲಿಲ್ಲ. ವಿದ್ಯಾಭ್ಯಾಸ ಭರದಿಂದ ಸಾಗಿತು. ಹಳ್ಳಿಯಿಂದ ಇಲ್ಲಿಯತನಕ ಬಂದುದಕ್ಕಾಗಿ ವಿದ್ಯೆಯಲ್ಲಿ ಪ್ರಥಮ ಸ್ಥಾನವನ್ನೇ ಪಡೆಯಬೇಕೆಂಬ ಮಹತ್ವಾಕಾಂಕ್ಷೆಯಿಂದ ಪ್ರಥಮ ಪೀಠಕ್ಕಾಗಿ ಹೋರಾಡಿದೆ. ಪ್ರಯತ್ನವೂ ಸಫಲ ಹೊಂದಿತು. ಇದರಿಂದಾಗಿ, ನನ್ನ ಸ್ಥಾನಕ್ಕಾಗಿ ಜನ ಅಭಿಮಾನ ತೋರ್ಪಡಿಸಲಾರಂಭಿಸಿದರು. ಕೀರ್ತಿಗಾಗಿ ಹೋರಾಡತೊಡಗಿದೆ. ಬಹುಮಾನಕ್ಕಾಗಿ ದುಡಿಯತೊಡಗಿದೆ. ನನ್ನ ಸೌಂದರ್ಯಕ್ಕೆ ತಕ್ಕ ವೇಷಭೂಷಣಗಳಿಲ್ಲವೆಂದು ಅಸಹ್ಯಪಡುತ್ತಿದ್ದ ರಮಣಿಯರೂ ನನ್ನ ಚುರುಕು ವಿದ್ಯಾಕುಶಲತೆಗಾಗಿ ಅಭಿಮಾನ ತೋರ್ಪಡಿಸಲಾರಂಭಿಸಿದರು. ಅದೊಂದು ಕಾಲೇಜಿನಿಂದ ನಾನು ಪಡೆದ ಹೆಮ್ಮೆ. ಹುಡುಗಿಯರ ಕಣ್ಣಿಗೆ ನಾನು ಆ ಸಮಯದಲ್ಲಿ ಹಿಡಿಯದವಳಾಗಿದ್ದರೂ, ಹುಡುಗರ ಮನಸ್ಸು ನನ್ನನ್ನು ಕಂಡೇ

ರಮಿಸುವಂತಹ ಮೋಹಿನಿಯಾಗಿದ್ದೆ. ನನ್ನ ಉಡುಪು ತೊಡುಪುಗಳಲ್ಲಾವ ಆಡಂಬರವಿಲ್ಲದಿದ್ದರೂ ನನ್ನ ಸಹಜ ಸೌಂದರ್ಯವು ಅವರನ್ನು ನನ್ನೆಡೆಗೆ ಆಕರ್ಷಿಸುತ್ತಿತ್ತು. ನಾನು ಕ್ಲಾಸಿನಿಂದ ಹೊರಹೊರಟೆನೆಂದರೆ ಯುವಕರ ತಂಡವು ನನ್ನ ಚಲನವಲನವನ್ನೇ ದಿಟ್ಟಿಸುತ್ತಾ ನಿಲ್ಲುತ್ತಿತ್ತು. ಹಲವಾರು ತರುಣರು ಇಹದ ಪರಿವೆಯಿಲ್ಲದೆ ವಿಮರ್ಶಕರಾಗಿ ಬಿಡುತ್ತಿದ್ದರು. ನನ್ನ ವಿಷಯವಾಗಿಯೇ ಅವರಾಡುತ್ತಿರುವದು; ಅದೂ ನನ್ನ ಕರ್ಣರಂಧ್ರವನ್ನು ಪ್ರವೇಶಿಸಬೇಕೆಂದು ಗಟ್ಟಿಯಾಗಿ ರಸಬೆರೆತ ನುಡಿಗಳನ್ನೇ ನುಡಿಯುತ್ತಿದ್ದರು. ಪ್ರಥಮದಲ್ಲಿ ಈ ವರ್ಣನೆಗಳೆಲ್ಲ ನನಗೆ ಅಸಹ್ಯವಾಗಿಯೇ ಕಂಡವು. ಪೇಟೆಗಾಳಿಗೆ ನಾನು ದೂರು ಹೋಗಿರದ ಸಮಯವದು. ಸಮಯ ಕಳೆದಂತೆ, ನನ್ನ ಕ್ಲಾಸ್‌ಮೇಟ್‌ಗಳಲ್ಲಿ ಕೆಲ ಧನಿಕ ಪುತ್ರಿಯರು ಧರಿಸುತ್ತಿದ್ದ ವಸ್ತ್ರ, ಉಪಯೋಗಿಸುತ್ತಿದ್ದ ಸೌಂದರ್ಯ ಸಾಧನ, ಯುವಕರೊಡನೆ ಚರ್ಚೆ ಮಾಡಿ ಜಗಳಾಡುವ ನಿರ್ಭಯತೆ ಕಂಡು ನಾನು ತೆಪ್ಪಗಾದೆ. ಯುವಕರೆಂದರೆ ಹುಲಿ ಎಂದು ಭಾವಿಸಿ ಬೆದರೋಡುತ್ತಿದ್ದ ನಾನು ಪರಿವರ್ತನೆಗೊಂಡು ಮಂದಹಾಸ ಪ್ರವೃತ್ತಿಯಿಂದ ಅವರೊಡನೆ ಸಹೋದರ ಭಾವನೆಯನ್ನು ಪ್ರಕಟಿಸಲನುವಾದೆ. ಕಣ್ಣೆತ್ತಿ ನೋಡಿದ ಒಂದೆರಡು ಯುವಕರ ನೋಟಕ್ಕೆ ಸಹೋದರರೆಂಬ ಭಾವನೆಯಿಂದ ಮುಗುಳು ನಗೆಯ ಉತ್ತರವನ್ನಿತ್ತೆ.

"ಆದರೆ ಯುವಕರೇಂಥಹರಮ್ಮ! ಸ್ವಲ್ಪ ಸಲಿಗೆ ತೋರಿದೊಡನೆ ಬೆಲ್ಲವನ್ನು ಮುತ್ತುವ ಇರುವೆಗಳಂತೇ ನಮ್ಮನ್ನು ಮುತ್ತಲನುವಾಗುತ್ತಾರೆ. ನಾನು ಚಿಕ್ಕಂದಿನಲ್ಲಿ ಈಗಿನಂತಿರಲಿಲ್ಲ. ಆದೆಷ್ಟೋ ಸೌಂದರ್ಯವತಿಯಾಗಿದ್ದೆ. ಅದು ನನ್ನ ಹುಟ್ಟುಬದುಕು! ಇಂದಿನ ನವತಾರುಣ್ಯದ ತರುಣಿಯರಂತೆ, ಪೌಡರ್, ಸ್ನೋ, ಹೇರ್ ಆಯಿಲ್‌ನಿಂದ ಬಂದ ಸೌಂದರ್ಯ ನನ್ನದಲ್ಲ. ನಾನು ಅವರ ಬಲೆಗೆ ಬೀಳಬಹುದೆಂದು ನನ್ನ ನಗೆಯಿಂದ ತಿಳಿದ ಯುವಕರು, ನನ್ನ ಮನವನ್ನು ಇನ್ನಷ್ಟು ಬರಸೆಳೆಯಬೇಕೆಂದು ವಿಧವಿಧದ ವಸ್ತ್ರಾಲಂಕಾರ ಭೂಷಿತರಾಗಿ ನಾಲ್ಕು ಮೈಲು ದೂರದ ವರೆಗೆ ಘಮಘಮಿಸುವ ಕೇಶತೈಲವನ್ನು ಪೂಸಿಕೊಂಡು, ಕಾಲಿಗೆ ಅರ್ಧ ಫೂಟು ಎತ್ತರದ ಬೂಟ್ಸನ್ನು ಧರಿಸಿ, 'ಥರ್‌ಭರ್' ಶಬ್ದ ಮಾಡುತ್ತಾ ನನ್ನ ಇದಿ

ರಲ್ಲಿ ಸುಳಿದಾಡಿ ಮಾತಾಡಲು ಅವಕಾಶ ಒದಗುವದೋ ಎಂದು ಪ್ರಯತ್ನಿಸಿದರು. ಈ ಕುಟಿಲತೆಗಳ ಮರ್ಮವನ್ನು ಅರಿತ ನಾನು ಉತ್ಸಾಹದಿಂದ ಬಂದ ಅವರನ್ನು ನಿರುತ್ಸಾಹಗೊಳಿಸದೆ ಒಂದೆರಡು ಮಾತಿನಿಂದಲೇ ಸಮಾಧಾನಪಡಿಸಿ ಅಟ್ಟಿಬಿಡುತ್ತಿದ್ದೆ. ಇಷ್ಟೊಂದು ಉದಾರತೆ ನನ್ನಿಂದ ಅವರಿಗೆ ಅರ್ಪಿತವಾಗಿತ್ತು.

" ಪೇಟೆ ಸೇರಿ ಕೆಲ ಸಮಯ ಅಡ್ಡಾಡಿದ ನನಗೆ, ಇತರರಂತೆ ನಾನೇಕೆ ಆಡಂಬರದುಡಿಗೆ ತೊಡಿಗೆಗಳನ್ನು ಧರಿಸಬಾರದೆಂಬ ಕೋಲಾಹಲ ನನ್ನ ಮನಸ್ಸಿನಲ್ಲೇ ಹೊಯ್ದಾಟವಾಡುತ್ತಲಿತ್ತು. ಎಷ್ಟಾದರೂ ಸುತ್ತಲಿರುವ ಪ್ರಕೃತಿಯ ಚಟ ನನ್ನನ್ನು ಒತ್ತಾಯಿಸುತ್ತಿತ್ತು. ಹಣಕ್ಕಾಗಿ ಮನೆಗೆ ಬರೆದರೆ ನಿರಾಶೆಯಾಗಲಾರದೆಂಬುದು ಮೊದಲೇ ತಿಳಿದ ವಿಚಾರ. ' ಬೆಳೆಯುವ ಹುಡಿಗಿ; ಪಟ್ಟಣ ಸೇರಿದಾಗ ಹಳ್ಳಿಯ ಕುರಿಮರಿಯಂತಿರಬಾರದು; ಹೊಟ್ಟೆ ಬಟ್ಟೆಗೆ ಕಷ್ಟಪಡದೆ ಸುಖದಿಂದ ಕಲಿಯುತ್ತಿರಲಿ ' ಎಂದು ಅವರು ತಮ್ಮ ಹೊಟ್ಟೆ ಬಾಯಿ ಕಟ್ಟಿ ನನ್ನ ಖರ್ಚಿಗೆ ಹಣ ಒದಗಿಸುತ್ತಿದ್ದರು. ಗೆಳತಿಯರ ನೇಕರು ಸಿನೇಮಾ ತಾರೆಯರಂತೆ ಮೆರೆದಾಡುವುದನ್ನು ಕಂಡು ನನ್ನ ಆಶೆಯೂ ಬಲವತ್ತರವಾಯಿತು. ನಾನು ಅವರಂತೆ ಮೆರೆಯಬೇಕು; ಶೋಕಿನ ರಾಣಿಯಾಗಿ ಶೋಭಿಸಬೇಕು; ಎಂದೆಲ್ಲ ಆಲೋಚಿಸಿದೆ. ಆದರೆ ಮುನ್ನುಗ್ಗಲು ಹಣ ತಡೆಹಿಡಿದುದರಿಂದ ಹೆಚ್ಚಿನ ಆಡಂಬರವಿಲ್ಲದೆ ತಣ್ಣಗಾದೆ. ನನ್ನ ರಕ್ಷಕರ ರಕ್ತದ ಬಿಸಿಹೊಗೆ ನನ್ನ ಕಣ್ಣಿಗೆ ಬೀಸದೆ ಇರುತ್ತಿಯೇ ?

" ಬರಬರುತ್ತಾ ನನ್ನ ಮನಸ್ಸೇಕೋ ಸ್ತಿಮಿತಬಿಟ್ಟು ಹರಿಯಲಾರಂಭಿಸಿತು. ಅದಕ್ಕೆ ಕಾರಣ ಅವನ ಕಲಾಕೌಶಲ್ಯವೆನ್ನಬೇಕು. ಶ್ರೀನಿವಾಸ, ನಮ್ಮ ಕ್ಲಾಸಿನ ಸಹಪಾಠಿ. ರೂಪದಲ್ಲಿ ಮನ್ಮಥ; ಗುಣದಲ್ಲಿ ವಸುಧೆ; ವಿದ್ಯೆಯಲ್ಲಿ ನಿಪುಣ; ಆಟದಲ್ಲಿ ಚತುರನಾಗಿದ್ದ. ನನ್ನಂತೆ ಕ್ಲಾಸಿನಲ್ಲಿ ಪ್ರಥಮ ಸ್ಥಾನಕ್ಕಾಗಿ ಟೊಂಕ ಕಟ್ಟಿದವರಲ್ಲಿ ಅವನೊಬ್ಬ. ನನ್ನ ಮನಸ್ಸು ಅವನ ಆಟಪಾಟಗಳಿಗೆ ಮೋಹಗೊಂಡಿತು. ರತ್ನದಂತಹ ಯುವಕ. ಯಾರ ಗೊಡವೆಗೂ ಹೋಗದೆ, ತನ್ನ ಕೆಲಸವೂ, ತಾನೂ ಆಯಿತೆನ್ನುವಂತೆ ಇರುತ್ತಿದ್ದ. ಸಮಯಕ್ಕೆ ಸರಿಯಾಗಿ ಕಾಲೇಜಿಗೆ ಬರುವುದು, ತನ್ನ

ಕೆಲಸ ಮುಗಿಯುವ ತನಕ ಆಯಾಯ ಕ್ಲಾಸಿನಲ್ಲಿ ಕುಳಿತಿರುವುದು, ಪಾಠ ಮುಗಿದೊಡನೆ ನೆಟ್ಟಗೆ ತನ್ನ ಹಾದಿ ಹಿಡಿಯುವುದು, ಇಂಥ ರೀತಿ ಅವನ ದಾಗಿತ್ತು. ಹುಡುಗಿಯರೊಡನೆ ಮಾತಾಡಬೇಕು, ಸ್ನೇಹ ಬೆಳೆಸಬೇಕು ಎಂಬ ಅಭಿಲಾಷೆಗಳೇ ಅವನಲ್ಲಿದ್ದಿರಲಿಲ್ಲ. ಆಟ, ಪಾಠ, ಭಾಷಣಗಳಲ್ಲಿ ಉತ್ಸಾಹಿಯಾಗಿ ಪ್ರತಿಯೊಬ್ಬನ ಸ್ಮರಣಾಪ್ರಿಯನಾಗಿದ್ದ. ಆದರೆ ಅವನಿ ಗಾರ ಗೆಳೆತನವೂ ಅಗತ್ಯವಿದ್ದಂತೆ ತೋರಲಿಲ್ಲ. ಅವನ ವಿದ್ಯಾಪ್ರೇಮ, ಮಾತಿನ ಬಿಗುಗಳೆಲ್ಲವೂ ನನ್ನನ್ನು ಸ್ನೇಹಪಾಶದಿಂದ ಬಿಗಿಯಿತು. ಮೊದ ಲದು ಕೈಗೆಟಕದ ಫಲವಾಗಿತ್ತು. ಕಾರಣ ಅವನು ಯಾರ ಕಣ್ಣನೋಟಕ್ಕೂ ನಗೆಯ ಸೆಳೆತಕ್ಕೂ ಬೆಡಗಿನ ಬಿನ್ನಾಣಗಳಿಗೂ ಮರುಳಾಗಲಿಲ್ಲ. ಮುಖ ನೋಡಿ ಮುಗುಳುನಗೆ ನಕ್ಕಾಗಲೂ ಮೊಗದಿರುಹಿ ಮುನ್ನಡೆಯುತ್ತಿದ್ದ ದಿಟ ವ್ಯಕ್ತಿ! ಅವನೊಡನೆ ಸ್ನೇಹ ಬೆಳೆಸಬೇಕೋ, ಬೇಡವೋ ಎಂಬ ವಿಚಾ ರದ ಹೋರಾಟದಲ್ಲಿ 'ಬೇಕು' ಎಂಬ ನಿರ್ಧಾರ ದೊರೆಯಿತು. ಆದರೆ ಅವನ ಸಖ್ಯ ಬೆಳೆಸುವ ವಿಧಾನವಾವುದು? ವಿಚಿತ್ರ ವ್ಯಕ್ತಿಯೊಡಗೂಡಲು ವಿಚಿತ್ರ ವಿಧಾನವನ್ನೇ ಹುಡುಕಬೇಕಾಯಿತು. ಏನು? ಎಷ್ಟು ಹೌಹಾರಿ ದರೂ ದಾರಿ ಕಾಣದಾದೆ. ಒಂದು ರಾತ್ರಿ ಇಡೀ ವ್ಯಾಕುಲಭರದಿಂದ ಕೂಡಿದ ಮನಸ್ಸು ವಿಧಾನ ಹುಡುಕಲು ಹೊರಟಿತ್ತು. ಅಂದು ನಿದ್ದೆಯ ಗಂಧ ಗಾಳಿಯೇ ನನಗೆ ಸೋಂಕಿರಲಿಲ್ಲ. ಎಲ್ಲರಂತೆ ನನಗೂ ಬಯಕೆ ಫಲಿ ಸಲು, ರೀತಿ, ನೀತಿ, ವಿಧಿ, ವಿಧಾನಗಳ ಪ್ರವಚನವಾಯಿತು. ಆದರೆ ಪ್ರಯೋಜನ ದೊರೆಯಲಿಲ್ಲ. ಆತನ ಗುಣಸಂಪತ್ತನ್ನೂ ವಿದ್ಯಾಶ್ರೀಯ ಸ್ಸನ್ನೂ ನೆನಸಿದಾಗ ನನ್ನ ಉದ್ವೇಗವು ಉಕ್ಕಿ ಉಕ್ಕಿ ಹರಿಯಲಾರಂಭಿ ಸಿತು. ಹೇಗಾದರೂ ಅವನನ್ನು ಬಿಡುವುದೇ ಇಲ್ಲವೆಂಬ ನಿರ್ಧಾರ........ ಜಯವಿಲ್ಲದೆ ಅಪಜಯವು ದೊರೆತರೂ ಚಿಂತಿಲ್ಲ, ನನ್ನ ಪ್ರಯತ್ನವನ್ನು ಬಿಡ ಲಾರೆನೆಂದು ಶಪಥ ಮಾಡಿಕೊಂಡೆ.

"ಅಂದು ಕಾಲೇಜಿನಲ್ಲಿ ಕುಳಿತಿದ್ದೆ. ನನ್ನ ಮನಸ್ಸೆಲ್ಲೋ ಹಾರಿ ಹೋಗಿತ್ತು. ಕ್ಲಾಸಿನಲ್ಲಿ ಏನೆಲ್ಲ ಆಗಿದೆ ಎಂಬ ಪರಿವೆಯೇ ಇದ್ದಿಲ್ಲ. ತಟ್ಟನೆ ಒಂದಾಲೋಚನೆ ಹೊಳೆದು ನನ್ನ ಮನ ಅರಳಿತು. ಒಂದು ಚಿಕ್ಕ ಉಪಾ ಯವು ನನಗೆ ಮುಂದಿನ ದಾರಿ ತೋರಿಸಿತು. ಇನ್ನಾವಾಗ ಕಾಲೇಜು

ಬಿಟ್ಟೀತು ಎಂಬುದೇ ನನ್ನ ತವಕವಾಯಿತು. ಅಂತೂ ನಾನು ಸಮಯ ವನ್ನೆಂತು ಕಳೆದೆನೋ ! ಕಾಲೇಜು ಬಿಟ್ಟಿತು. ಎಲ್ಲರಿಗಿಂತಲೂ ಮುಂದಾಗಿ ಗೇಟಿನ ಬಳಿ ಸಾರಿದೆ. ನಂತರ ನನ್ನ ಓಟವೇ ತಡೆದು ನಿಂತಿತು. ಅತ್ತ ಮಗ್ಗುಲಿನ ಯುವಕರು ಹೊರಡುವ ಗೇಟಿನ ಬಳಿ ನನ್ನ ನೋಟ ಸಾರಿತು. ಯಾರೋ ಇಬ್ಬರು ಅವಸರವಸರವಾಗಿ ಹೊರಟು ಮಾರ್ಗವನ್ನಾಕ್ರಮಿಸಿ ದರು. ಮೂರನೆಯದಾಗಿ ಶ್ರೀನಿವಾಸನೇ ಹೊರಟ. ಮಾರ್ಗವನ್ನು ಸೇರಿ ಪಕ್ಕದ ಬದಿಗೆ ಸರಿದ ಅವನು ತನ್ನ ಸ್ವಾಭಾವಿಕ ನಡಿಗೆಯಲ್ಲೇ ಮುಂದುವ ರಿಯುತ್ತಿದ್ದ. ನನ್ನ ಮನೋಹರನನ್ನು ಕಂಡು ನನ್ನ ಹೃದಯಕಮಲ ಅರಳಿ ಆನಂದದಿಂದ ತಲೆ ತೂಗಲು ತೊಡಗಿತು. ನಾನು ಸಂಶೋಧಿಸಿದ ಉಪಾಯವನ್ನು ಇಂದು ಪ್ರಯೋಗಿಸಬೇಕೆಂದು ಅವಸರವಸರದಿಂದ ಅವನ ಹಿಂದೆಯೇ ಸಾಗಿದೆ. ನಾನು ಶೋಧಿಸಿದ ಉಪಾಯ ಬೇರೇನೂ ಅಲ್ಲ; ಕಸೂತಿ ಕೆಲಸದಿಂದ ರಚಿಸಿದ ನನ್ನ ಪುಟ್ಟ ಕರವಸ್ತ್ರವನ್ನು ನನಗರಿವಿಲ್ಲದಂತೆ ನಟಿಸಿ, ಅವನ ಮುಂದೆ ಬಿಸುಟು ಹೋಗುವ ಅಣುಮಾತ್ರ ಸಾಹಸ. ರಭಸ ದಿಂದ ಹಾದು ಅವನನ್ನು ಹಿಮ್ಮೆಟ್ಟಿದೆ. ಒಂದೆರಡು ಹೆಜ್ಜೆ ಮುಂದುವರಿ ಯುವುದರೊಳಗೆ ನನ್ನ ಉಪಾಯದಂತೆ, ಕರವಸ್ತ್ರವನ್ನು ಪುಸ್ತಕಗಳೆಡೆಯಿಂದ ಜಾರಿಸಿ ಬಿಟ್ಟೆ. ಅಂತೂ ನನ್ನ ಸಾಹಸ ಅರ್ಧ ಕೈಗೂಡಿತೆಂದು ನೆನಸಿ ದಾಗಲೇ, ಇನ್ನವನು ಕರೆಯುವನೋ ಇಲ್ಲವೋ ಎಂಬ ಸಂಶಯ. ಕಿವಿ ಗಳು ನಿಮಿರಿ, ಹಿಂದಿನಿಂದ ಬರಬಹುದಾದ ಮೋದದ ನುಡಿಗಳನ್ನೇ ಆಲಿ ಸುತ್ತಿದ್ದೆ. ನನ್ನೆದೆ ಡವಡವಗುಟ್ಟುತ್ತಿತ್ತು. ಆದರೆ ನನ್ನ ಅದೃಷ್ಟ ಬಲ ದಿಂದಲೋ ಎಂಬಂತೆ, ಅವನು ಪರೋಪಕಾರ ನೀತಿಯನ್ನು ಮರೆಯಲಿಲ್ಲ. ಕಾಲಬಳಿಯಲ್ಲಿದ್ದ ಕರವಸ್ತ್ರದ ಕಡೆಗೆ ಬಾಗುತ್ತ:

"ತಾರಾ........ 'ಹೇಂಡ್ ಕರ್ಚೀಫ್' " ಎಂದ.

ನಾನೂ ಚಕಿತಳಾದವಳಂತೆ ಹಿಂತಿರುಗಿ ನೋಡಿದೆ. ಕೈಯಲ್ಲಿದ್ದ ಕರವಸ್ತ್ರವನ್ನು ಮುನ್ನೀಡಿದ.

"ಯಾರದು ?" ಎಂದು ಗಂಭೀರ ಧ್ವನಿಯಿಂದ ಕೇಳಿದೆ.

"ನಿನ್ನ........ಹೇಂಡ್ ಕರ್ಚೀಫ್........ ಇಲ್ಲಿ ಬಿದ್ದುಹೋಯಿತು." ಎಂದ ತನ್ನ ಸಾಮಾನ್ಯ ಕಂಠೋಕ್ತಿಯಿಂದ.

" ಪುಸ್ತಕಗಳನ್ನು ಕೆಳಮೇಲು ಮಾಡಿ ಹುಡುಕಿದವಳಂತೆ ನಟಿಸಿ, ಮಂದಹಾಸದ ಕಿರುನಗೆ ಬೀರಿ ಕರವಸ್ತ್ರವನ್ನು ತೆಗೆದುಕೊಂಡು ' ಥೇಂಕ್ಸ ' ಎನ್ನುತ್ತ ಮುಂತಿರುಗಿದೆ. ಅವನೂ ನಗುಮೊಗ ತೋರಿದ."

" ಅಂದೇ ನಮ್ಮ ಸ್ನೇಹವೃಕ್ಷದ ಬೀಜ ಬಿತ್ತಿದ ದಿನ."

" ಅಂದಿನಿಂದ ಅವನು ನನ್ನ ಮುಖ ನೋಡಿ ಮುಗುಳ್ನಗೆ ಬೀರಲಾರಂಭಿಸಿದನು. ಮೊದಮೊದಲು ಅದೇಕೋ ಅವನ ಮುಖದಲ್ಲಿ ಅದೊಂದು ತೆರನಾದ ವಿಕೃತ ಭಾವನೆಯೇ ಎದ್ದು ಕಾಣುತ್ತಿತ್ತು. ತಾನಾವುದೋ ಘೋರ ಅನ್ಯಾಯವೆಸಗಿರುವಂತೆ ಅವನ ಮುಖ ಸಂತಾಪ ಸೂಚನೆ ಕೊಡುತ್ತಿತ್ತು. ಬರಬರುತ್ತಾ ಅವನಲ್ಲಿನ ಆ ಸಂಕೋಚ ಪ್ರವೃತ್ತಿಗಳೆಲ್ಲವೂ ದೂರವಾದುವು. ನನ್ನ ಸಹವಾಸವೆಂದರೆ ಅವನಿಗೆ ಪ್ರಿಯವಾಯಿತು. ನಮ್ಮ ಭೇಟಿ ದಿನಕ್ಕೊಂದು ಬಾರಿ ತಪ್ಪದೆ ಆಗುವಂತಾಯಿತು. ಶಾಲೆಯ ಆಟ ಪಾಠಗಳ ಚರ್ಚೆಯೇ ನಮ್ಮೀರ್ವರ ವಾದಕ್ಕೆ ಮೂಲ ವಿಷಯವಾಯಿತು. ಹರಟೆಗೆ ಇಳಿದು ಗಂಟೆಗಟ್ಟಲೆ ಸಮಯ ಸವೆದರೂ ಅದರ ಗೊಡವೆ ಇಲ್ಲದೆ ಮುಂದುವರಿಯುತ್ತಿತ್ತು. ಅಂತೂ, ನಮ್ಮ ಸ್ನೇಹ ಅಚಲವೆನ್ನಬಹುದು.

" ಅವನ ನಿಜವಾದ ಅರಿವಾದುದು, ನಾನವನೊಂದಿಗೆ ಹರಟೆಗೆ ಆರಂಭಿಸಿದ ನಂತರ. ಆಗ ನನ್ನಮನಸ್ಸು ಮತ್ತಷ್ಟು ಸಂತೋಷದಿಂದ ಉಬ್ಬಿತು. ನನಗೆ ದೊರೆತ ಸಂಗಾತಿ ಎಂದರೆ ಬಾಯಿ ಬಿಟ್ಟು ಹೊಗಳುವಷ್ಟು, ಕಣ್ಣು ಬಿಟ್ಟು ನೋಡುವಷ್ಟು ಹಿಡಿತಕ್ಕೆ ಬಾರದಂಥವನು. ಅವನರಿಯದ ವಿದ್ಯೆಯಿಲ್ಲ; ತಿಳಿಯದ ಕಲೆಯಿಲ್ಲ. ಸಕಲವನ್ನೂ ಪರಿಪಾಠ ಮಾಡಿಕೊಂಡಿರುವ ಅವನಿಗೆ ಅದೇ ಅಪಾರ ಸಂಪತ್ತು. ನಾಟ್ಯ, ಸಂಗೀತ, ಭಾಷಣ, ಕವಿತೆಗಳೆಂದರೆ ಅವನಿಗೆ ಪಂಚಪ್ರಾಣ. ಇವಿಷ್ಟೆ ಅಲ್ಲದೆ ಕುದುರೆ ಸವಾರಿ, ಈಜಾಟ, ಬೆಡ್‌ಮಿಂಟನ್ ಆಟಗಳಲ್ಲೂ ಸಿಸ್ಸೀಮ. ಕವಿತೆಗಳಲ್ಲಿ ದಿನವಿಡೀ ಕಳೆಯುತ್ತಿದ್ದ. ಫಲವಾಗಿ ಅವನಲ್ಲಿ ಕವಿತಾರಚನಾ ಶಕ್ತಿಯೂ ಸಂಚಯವಾಗಿತ್ತು. ಅವನೂ ಕೆಲವೊಮ್ಮೆ ಕವಿತೆಗಳನ್ನು ರಚಿಸಿ ನನಗೆ ಓದಲು ಕೊಡುತ್ತಿದ್ದ. ಅಲ್ಲದೆ ರಸವತ್ತಾದ ಅದರ ನಿಜರೂಪದಲ್ಲೇ ಅದನ್ನು ಓದಿ ತೋರಿಸುತ್ತಿದ್ದ, ಅದರ ಶೈಲಿ ಎಂತಹನ ಕಲ್ಲುಹೃದಯವನ್ನು ಕರಗಿಸಿ ಬಿಡುತ್ತಿತ್ತು. ಇಷ್ಟಾದರೂ ಒಮ್ಮೆ ಓದಿ ಮುಗಿಸಿದ ನಂತರ ಅದರಲ್ಲಿ ಅವನಿಗೆ ತೃಪ್ತಿ ಇಲ್ಲ. ಇದೊಂದು

ವಿಚಿತ್ರ. ಮತ್ತೆ ತೃಪ್ತಿ ಹೊಂದುವುದು ಇನ್ನೊಂದು ಕವಿತೆಯನ್ನು ರಚಿಸಿ
ಯಾದ ನಂತರವೆ! ಇನ್ನು ಆಟವೆಂದರೂ ಅಷ್ಟೇ ಪ್ರೀತಿ. ಕಾಲೇಜು
ಬಿಟ್ಟು, ಕಾಫಿ ಮುಗಿದ ನಂತರ ಬೆಡ್‌ಮಿಂಟನ್ ಆಡದ ದಿನವಿಲ್ಲ. ನನಗೂ
ಬೆಡ್‌ಮಿಂಟನ್ ಎಂದರೆ ಪ್ರಾಣ. ಒಂದೆರಡು ಸಲ ಆಟದಲ್ಲಿ ಗೆದ್ದು ಬಹು
ಮಾನ ಪಡೆದುದೂ ಇದೆ. ನಾನು ಅವನ ಪಂಕ್ತಿಯನ್ನು ಅನುಸರಿಸಿದ
ನಂತರ ಅವನ ಆಟದ ಆಸಕ್ತಿ ಇನ್ನೂ ಜಾಸ್ತಿಯಾಯಿತು. ಹೀಗಿರುತ್ತಾ
ಒಂದು ದಿನ ನಮ್ಮೊಳಗೆ ಪಂಥದ ಆಟ ಒಂದು ಏರ್ಪಾಡಾಯಿತು. ನಾವು
ಪ್ರತಿಸ್ಪರ್ಧಿಗಳಾಗಿ ಆಟ ಆರಂಭಿಸಿದೆವು. ಚತುರನ ಮುಂದೆ ನನ್ನ ಕೈಚಳ
ಕವು ಪ್ರದರ್ಶನವಾಯಿತು. ಆಟದಲ್ಲಿ ನಾನು ಸೋತು ಸುಣ್ಣವಾಗಿ
ಹೋಗಿದ್ದೆ. ಆದರೂ ಆಟ ಬಿಟ್ಟು ಕೊಡಲಾರೆನೆಂಬ ಹಟ! ಕೊನೆಯ
ಆಟದಲ್ಲಿ ನಾನೇ ವಿಜಯಿಯಾದೆ. ಇದು ನನಗೊಂದು ಹೆಮ್ಮೆ ಎನ್ನಬೇಕು.
ಅಂದು ಅವನಿಗೂ ಸಂತೋಷವೇ ಆಗಿತ್ತು, ಆಟದಲ್ಲಿ ತಾನು ಸೋತಿ
ದ್ದರೂ ಸಂತೋಷಭರಿತವಾದುದು ಸೋಜಿಗ. ಅಂದು ನನ್ನ ಮೇಲೆ ಎಂದಿ
ಲ್ಲದ ಆದರದ ಸತ್ಕಾರದ ನುಡಿಗಳು. ಅಂದೇ ನಮ್ಮಿಬ್ಬರ ಮಾರ್ಗಸಂಚಾರ
ನವದಂಪತಿಗಳಂತೆ ಬಾಳ ಜೀವನದ ಸುಖದುಃಖಗಳ ವಾದ ವಿವಾದದ ಸರಿ
ಮಳೆ ಕರೆಯುತ್ತಾ ಮುಂದೆ ಸಾಗಿದೆವು.

" ಕತೆ ಬರೆಯುವುದನ್ನು ತನ್ನ ನಿತ್ಯದ ದಿನಚರಿಯಲ್ಲಿ ಬಳಸಿಕೊಂಡು
ಬಂದಿದ್ದ. ಬಿಡುವಿನ ಸಮಯದಲ್ಲಿ ಏನಾದರೂ ವಿಷಯಗಳನ್ನೆತ್ತಿ ಬರೆಯು
ತ್ತಿದ್ದ. ಅವನು ಚಿತ್ರಿಸುತ್ತಿದ್ದ ಸರಳತರದ ಪ್ರಣಯ ದೃಶ್ಯಗಳು ಎಂತಹ
ಓದುಗನನ್ನೂ ಮುಗ್ಧಗೊಳಿಸುತ್ತಿದ್ದುವು. ತಾನು ಬರೆದ ಪ್ರತಿಯೊಂದು ಕಥೆ
ಯನ್ನು ನನಗೆ ತಂದು ಓದಲು ಕೊಡುತ್ತಿದ್ದ. ನನಗೂ ಅವನ ಬರಹ
ವೆಂದರೆ ಅಚ್ಚುಮೆಚ್ಚು. ಒಂದನ್ನು ಓದಿ ಮುಗಿಸಿದ ನಂತರ ಇನ್ನೊಂದ
ಕ್ಕಾಗಿ ಚಾತಕ ಪಕ್ಷಿಯಂತೆ ಕಣ್ಣುಬಿಟ್ಟು ಇದಿರು ನೋಡುತ್ತಿದ್ದೆ. ಒಂದು
ಸಲ, 'ನಾನೂ ನಿನ್ನಂತೆ ಏಕೆ ಕತೆ ಬರೆಯಬಾರದು?' ಎಂದು ಕೇಳಿದೆ.
'ಬೇಡವೆಂದವರಾರು? ಬರೆದುದೇ ಆದರೆ ನನಗೆ ಸಂತೋಷ' ಎಂದು
ಉತ್ತರಿಸಿದ. ಆದರೆ ನಾನೆಷ್ಟು ಪ್ರಯತ್ನಿಸಿದರೂ ಆ ಒಂದು ಕೆಲಸ
ನನ್ನಿಂದ ವಿಫಲವಾಯಿತು. ಅವನೆಷ್ಟೋ ಬರಹಗಳನ್ನು ಪತ್ರಿಕೆಗಳಿಗೆ ಕಳು

ಹಿಸಿ ಕೊಟ್ಟೆ. ಪ್ರತಿಯೊಂದೂ ಪ್ರಕಟವಾಯಿತು. ನಂತರ ಆಗಾಗ್ಗೆ ಕಥೆ ಗಳಿಗಾಗಿ ಸಂಪಾದಕರ ಬೇಡಿಕೆಯೂ ಬರಲಾರಂಭಿಸಿತು. ಆದರೆ ಸಮ ಯದ ಅಭಾವದಿಂದ ಹೆಚ್ಚಿನ ಶ್ರಮವಿಲ್ಲದೆ, ಬಿಡುವಿನ ಸಮಯದಲ್ಲಿ ಮಾತ್ರ ಸ್ವಲ್ಪ ಸ್ವಲ್ಪ ಬರೆದು ಅವರನ್ನು ತಣಿಸಿ ಹೆಸರು ಗಳಿಸಿದ್ದ.

" ನಾಟ್ಯದ ಅಭಿರುಚಿ ಅವನಿಗೆ ಚಿಕ್ಕಂದಿನಿಂದಲೂ ಇದ್ದಿತು. ಹೈಸ್ಕೂ ಲಿಗೆ ಬರುವಾಗಲೇ ನಾಟ್ಯಾಭ್ಯಾಸ ಮಾಡುತ್ತಿದ್ದನಂತೆ. ಶಾಲೆಯಲ್ಲಿ ಪ್ರತಿ ವರ್ಷದ ' ಸ್ಕೂಲ ಡೇ ' ಸಂದರ್ಭದಲ್ಲೂ ಒಂದೆರಡು ನಾಟ್ಯಗಳ ಪ್ರದ ರ್ಶನ ತಪ್ಪಿದ್ದಿಲ್ಲವಂತೆ. ತನ್ನ ನಾಟ್ಯ–ಕಲಾ–ಕೌಶಲ್ಯದ ವಿವರಗಳನ್ನೆಲ್ಲ ತಿಳಿಸುತ್ತಾ, ನನ್ನ ರೂಮಿಗೆ ಬಂದಾಗ ಒಂದೆರಡು ನಾಟ್ಯವನ್ನೂ ಮಾಡಿ ತೋರಿಸಿದ್ದ. ನಾಟ್ಯಕ್ಕೆ ಮೆರುಗು ಕೂಡುವಂತಹ ಹಲಕೆಲವು ಹಾವಭಾವ ಗಳನ್ನೂ ಮುಖಪರಿವರ್ತನಗಳನ್ನೂ ತೋರಿಸಿಕೊಡುತ್ತಿದ್ದ. ಇದನ್ನೆಲ್ಲ ಕಂಡಾಗ, ರಂಗಭೂಮಿಯಲ್ಲಿ ಇವನ ಶೋಭೆ ಎಂತಹುದೋ ಎಂದು ನನಗೆ ದಂಗಾಗುತ್ತಿತ್ತು. ನಿಜವಾಗಿಯೂ ಅವನು ನುರಿತವನು. ಹೀಗಿರುವಾಗ ಒಂದು ದಿನ ' ನಾನೂ ನಾಟ್ಯ ಕಲಿಯಬಾರದೇಕೆ ? ' ಎಂದು ಅವನೊಡನೆ ಕೇಳಿದೆ. ಉತ್ತರವಾಯಿತು. ಅಷ್ಟು ಕಲಿಯುವುದರಲ್ಲಿ ಆಸಕ್ತಿ ಉಳ್ಳವ ಳಾದರೆ ತಾನೇ ಕಲಿಸಿಕೊಡುವುದಾಗಿ ತಿಳಿಸಿದ. ನನ್ನ ಆನಂದಕ್ಕೆ ಎಲ್ಲೆ ಉಳಿಯಲಿಲ್ಲ. ಸಂತೋಷದಿಂದ ಒಪ್ಪಿಕೊಂಡೆ. ಹುಚ್ಚು ಹುರುಳಾಟದಂತೆ ನನ್ನ ವ್ಯಾಸಂಗಕ್ಕಾರಂಭವಾಯಿತು. ಒಂದೆರಡು ದಿನದ ಉತ್ಸಾಹ, ಮಧ್ಯ ದಲ್ಲಿ ನಡೆದಂತಾಯಿತು. ಆದರೂ ಅದು ನನ್ನಲ್ಲಿ ಉತ್ಸಾಹ ಪ್ರೇರಣೆಮಾಡಿ ಮತ್ತಷ್ಟು ಆಸಕ್ತಿಗೊಳ್ಳುವಂತೆ ಮಾಡಿದ. ಪುನಃ ನಾಟ್ಯದ ಗುಟ್ಟು ತಿಳಿದು ಬಂದಂತೆ ಉತ್ಸಾಹ ತನ್ನಿಂದ ತಾನೇ ಉದ್ರೇಕಗೊಂಡಿತು. ಇದೆಲ್ಲಾ ಅವನ ಪ್ರಯತ್ನದ ಫಲ ! ಈ ವ್ಯಾಸಂಗವು ನಡೆದಂತೆಲ್ಲ ನಾವಿಬ್ಬರೂ ಹೆಚ್ಚಾಗಿ ಒಂದಾಗಿರಲಾರಂಭಿಸಿದೆವು. ನಾಟ್ಯದ ಹುರುಪು ಇಹವನ್ನೇ ಮರೆಸುವಂತಿತ್ತು. ನನಗೆ ಶಿಕ್ಷಣವೀಯುವಾಗ ಅವನು ನರ್ತನಗೈಯ್ಯು ತ್ತಿದ್ದ. ನಮ್ಮ ಮಧುರ ಮಿಲನ ನಾಟ್ಯದ ಹೆಸರಲ್ಲಿ ತಲೆಯೆತ್ತಿ ಮೆರೆ ಯಿತು.

" ನನ್ನ ಕಾಲೇಜು ಶಿಕ್ಷಣದೊಂದಿಗೆ ನಾಟ್ಯಶಿಕ್ಷಣವೂ ಮುಂದುವರಿ

ಯುತ್ತಲೇ ಇತ್ತು. ಅವನ ಪ್ರಯತ್ನದಿಂದ ನಾಟ್ಯಕಲೆಯೂ ನನಗೆ ಸಂಪೂರ್ಣ ಅವಗತವಾಯಿತು. ಇನ್ನು ಇಬ್ಬರು ಸೇರಿದರೆ ಎಂತಹ ಮಿಗಿಲಾದ ನರ್ತನವನ್ನೂ ಮಾಡಬಹುದೆನ್ನುವಷ್ಟು ಧೈರ್ಯವಾಯಿತು. ನನಗೂ ಎಲ್ಲಾದರೊಂದೆಡೆ ನನ್ನ ನಾಟ್ಯ ಕಲೆಯನ್ನು ಪ್ರದರ್ಶಿಸಬೇಕೆಂದು ಆಶೆಯುಂಟಾಯಿತು. ಆದರೆ ಒಬ್ಬಳೇ ಅಭಿನಯಿಸುವುದು ಆಗದ ಮಾತು. ಆಡುವುದಿದ್ದರೂ ನಾವಿಬ್ಬರು ಒಟ್ಟಿಗೆ. ಇದಕ್ಕೆ ತಕ್ಕ ಸಂದರ್ಭ ದೊರೆಯುವದೇ ದುರ್ಲಭವಾಯಿತು. ಅವನಲ್ಲೂ ಈ ಆಶೆಯು ಆಗಿಂದಾಗ್ಗೆ ಕಾಡುತ್ತಲಿತ್ತು.

"ನಮ್ಮ 'ಕಾಲೇಜು ಡೇ' ಸಮೀಪಿಸುತ್ತಾ ಬಂದಂತೆ ನಮ್ಮ ನಾಟ್ಯದ ಪ್ರದರ್ಶನದ ಆಶೆಗೆ ಬೆಳಕು ಕಂಡಂತಾಯಿತು. ಅವನು ಪ್ರಿನ್ಸಿಪಾಲರೊಂದಿಗೆ ವಿಚಾರಿಸಿ ಸಮ್ಮತಿಯನ್ನು ಪಡೆದುಕೊಂಡ. ಶಿಷ್ಯರೇ ಮುಂದೆ ಬಂದು ತಮ್ಮ ಕಲೆಯ ಪ್ರದರ್ಶನವನ್ನು ಗೈಯುವರು ಎಂದೊಡನೆ ಅವರಿಗಾದ ಆನಂದ ಹೇಳಲಸದಳವಾದುದು. ನಮಗೆ ಶ್ರೇಯಸ್ಸನ್ನೇ ಕೋರಿ ಆಶೀರ್ವದಿಸಿದರು. ನಾವಾವ ರೀತಿ ನರ್ತನಗೈಯಬೇಕೆಂದು ಅಂದೇ ಚರ್ಚಿಸಲು ತೊಡಗಿದೆವು. ಬರೇ ಸೊಂಟ ಬಳುಕಾಟದ ನಾಟ್ಯ ಅವನಿಗೆ ಹಿಡಿಸಲಿಲ್ಲ. ಆದರೆಡೆಯಲ್ಲಿ ನಾಟಕದಂತೆಯೇ ಪ್ರೇಕ್ಷಕರು ಕಾಣಬೇಕೆಂಬ ಛಲ ಅವನದು.

ಹಾಗೆ ಕೆಲಹೊತ್ತು ಚರ್ಚಿಸಿ, ನವನಾಗರೀಕ ಸಮಾಜದ ಕಾಮುಕರ ಕಣ್ಣಿಗೆ ಮಣ್ಣೆರಚುವ ನಾಟ್ಯವೊಂದನ್ನು ರಚಿಸಬೇಕೆಂದು ನಿರ್ಧರಿಸಿದೆವು. ಅದಕ್ಕಾಗಿ ಅವನೊಂದು ಕತೆಯನ್ನೇ ರಚಿಸಿದ. ಅದೊಂದು 'ಕಾವ್ಯ ನರ್ತನ'. ಅದರ ಕತೆಯನ್ನು ತಿಳಿಸಬೇಕೆ ?"

"ಹೂಂ....ಹೇಳಿರಿ. ಕೇಳಿದರೆ ಮತ್ತೂ ಚೆನ್ನಾಗುತ್ತದೆ."

"ಚೆನ್ನಾಗಲು ಅದರಲ್ಲೇನೂ ಇಲ್ಲ. ಅವ ರಚಿಸಿದ ಕಥೆಯೇ ಹಾಗೆ. ಅದೆಲ್ಲೋ ಆದೊಂದು ದುರಂತ ನಡೆದಿರಬೇಕೆಂದು ತೋರುತ್ತದೆ. ಸುಶಿಕ್ಷಿತ ತರುಣನೋರ್ವನು ಕೆಲಸ ಹುಡುಕಿ ಹುಡುಕಿ ಎಲ್ಲಿಯೂ ದೊರೆಯದೆ ನಿರಾಶನಾಗುತ್ತಾನೆ. ಹಲವಾರು ಜನರ ಕಾಲು ಹಿಡಿದು ಸೋತು ಹೋದವನು. ಊರ ಪ್ರಸಿದ್ಧ ಶ್ರೀಮಂತ ಧಾರ್ಮಿಕನೂ, ಗುಣವಂತನೂ

ಎನಿಸಿದ ಮಹಾತ್ಮನೋರ್ವನಲ್ಲಿ ಕೆಲಸದ ಬೇಟೆಗಾಗಿ ಬಂದು ಒಂದು ಕೆಲಸ ಒದಗಿಸಿಕೊಡಬೇಕೆಂದು ಬೇಡಿಕೊಳ್ಳುವನು. ಆದರೆ ಬಡವನ ಒಡಲ ಉರಿ ಸಿರಿವಂತನಿಗರಿವಾದೀತೇ ? ಅದರಂತೆ ಅವನು ನಿಷ್ಕರುಣಿಯಾಗಿ "ಕೆಲಸ ದೊರಕಿಸಿ ಕೊಡಲು ನಾನೇನು ದಲಾಲಿಯೇ ? ಎಂದು ನಿರಾಕರಿಸುವನು. ಹಂಗಿಸಿ ಹೊರಗಟ್ಟುವನು. ಯುವಕ ಜೋಲು ಮೋರೆಯೊಂದಿಗೆ ಹಿಂತಿರುಗುವನು. ಸ್ವಲ್ಪ ಸಮಯದಲ್ಲಿ ಯುವತಿಯೋರ್ವಳು ನೌಕರಿ ಬೇಟೆಗಾಗಿಯೇ ಅವನಲ್ಲಿಗೆ ಬಂದು ನಾಡಲ್ಲಿ ಪಸರಿಸಿದ ಅವನ ಕೀರ್ತಿಯನ್ನು ಗುಣಗಾನ ಮಾಡಿ, ಅವನನ್ನು, ತನಗೊಂದು ಕೆಲಸ ದೊರಕಿಸಿ ಕೊಡುವಂತೆ ಬೇಡುವಳು. ಅವಳ ಸುಂದರ ವದನ, ಅಂದದ ಮೈಕಟ್ಟು ಕಂಡು ಪ್ರಫುಲ್ಲನಾದ ಶ್ರೀಮಂತ ಅವಳ ಮುಖವನ್ನೇ ದಿಟ್ಟಿಸುತ್ತಾ, ಅವಳ ಸೌಂದರ್ಯಕ್ಕೆ ಮರುಳಾಗಿ ಜೊಲ್ಲು ಸುರಿಸುತ್ತಾನೆ. ಪ್ರಾಯದಲ್ಲಿ ಮುಪ್ಪಿಗೆ ಸಮೀಪಿಸಿದವನಾದರೂ ತರುಣಿಯನ್ನು ಕಂಡೊಡನೆ ಉದ್ರೇಕಗೊಳ್ಳುತ್ತಾನೆ. ಉತ್ತಮವಾದ ಕೆಲಸ ಒದಗಿಸಿ ಕೊಡುವುದಾಗಿ ಭರವಸೆಯನ್ನೀಯುವನು. ತನಗೆ ಗೊತ್ತಿರುವ ಕಡೆಯಲ್ಲಿಯೇ ನೂರು ರೂಪಾಯಿ ಸಂಬಳದ ಕೆಲಸ ಬಂದಿರುವದೆಂದು ಅವಳನ್ನು ಆಶೆಯಿಂದ ಕೆರಳಿಸುವನು. ಅವಳ ಕೃತಜ್ಞತಾಪೂರ್ವಕ ಮಾತುಗಳು ಅವನ ಕಿವಿಗೆ ಕಟ್ಟಿಬಿಡುತ್ತವೆ. ಕಾಮದ ಕಣ್ಣನ್ನು ಮುಚ್ಚಲವನಿಂದ ಅಸಾಧ್ಯವಾಗುವುದು. ಉಲ್ಲಾಸದಿಂದ ಮೈಮರೆತ ಯುವತಿ ಅವನ ಕೃಪೆಗಾಗಿ ಕೊಂಡಾಡುವಳು. ಹಿಂದಿನಿಂದ ಬಂದ 'ಕಾಮುಕ' ಅವಳ ಕೈಹಿಡಿದೆಳೆದು, ಅವಳ ಕೈಯಲ್ಲಿ ನೋಟಿನ ಕಟ್ಟನ್ನೇ ಇಡುತ್ತಾನೆ. ಆಶ್ಚರ್ಯಚಕಿತಳಾದ ಆಕೆ ಹೆಜ್ಜೆ ಹಿಂದೆ ಹಾರಿ ತೀಕ್ಷ್ಣ ನೋಟದಿಂದ ನೋಡಿ 'ಏಕೆ ?' ಎಂದು ಪ್ರಶ್ನಿಸುವಳು. ನಿರ್ಲಜ್ಜನಾದ ಕಾಮಾಂಧನು ನಾಚಿಕೆಯಿಲ್ಲದೆ 'ನಿನಗೊಪ್ಪಿಯ ಕೆಲಸವನ್ನು ದೊರಕಿಸಿ ಕೊಡುವೆನು. ನನ್ನ ಮನೋಭಿಲಾಷೆಯನ್ನು ನೆರವೇರಿಸು. ಇದರಿಂದ ನಿನಗೆ ಬೇಕಾದ ವಸ್ತ್ರಭೂಷಣಗಳನ್ನು ತೆಗೆದುಕೋ. ನನ್ನ ಮಾತನ್ನು ನಡೆಸಿಕೊಡು. ನನ್ನ ಮನಸ್ಸನ್ನು ತೃಪ್ತಿಪಡಿಸು' ಎಂದು ಉಸುರುತ್ತಾನೆ. ಕ್ರೋಧಮತ್ತಳಾದ ತರುಣಿ ಕೆಣಕಿದ ಸಿಂಹಿಣಿಯಂತೆ ದುರುಗುಟ್ಟಿ ನೋಡುತ್ತಲಿದ್ದಾಳೆ. ತಡೆಯಲಾರದ ಅಪಮಾನ ಜ್ವಾಲೆಯು ಆಕೆಯ ಕಣ್ಣೆದಿರು

ಹೊಗೆಯಾಡುತ್ತದೆ. ಕೋಪೋನ್ಮತ್ತಳಾದ ಆಕೆ ಅವನ ಮುಖಕ್ಕೆ ' ಥೂ ' ಎಂದು ಉಗುಳಿ ಕೈಯಲ್ಲಿದ್ದ ಹಣವನ್ನು ಮುಖಕ್ಕೆರಚುವಳು. ನಂತರ ಬಿಗಿ ಮುಷ್ಟಿಯಿಂದ ತನ್ನ ದೇಹವನ್ನೇ ಒಮ್ಮೆ ಸಡಲಿಸಿ, ಗಿರ್ರನೆ ಬಂದು ಸುತ್ತು ತಿರುಗಲು ಬಿಗಿದ ಕಟ್ಟುಗಳೆಲ್ಲವು ಸಡಿಲಾಗಿ ಮೇಲುಟ್ಟ ಸೀರೆ ಬಿಚ್ಚಿ ಹೋಗಿ ನವತಾರುಣ್ಯದ ಯುವತಿಯ ಬದಲು ಮೊದಲು ಬಂದ ತರುಣನೇ ಸೃಷ್ಟಿ ಆಗುವನು. ತಿರಸ್ಕಾರದ ಎರಡು ವ್ಯಂಗ ನುಡಿ ನುಡಿದು, ಕಾಮುಕರ ಕಣ್ಣಿಗೆ ಮೆಣಸಿನ ಹುಡಿ ಎರೆದಂತಹ ವಾಕ್ಯಗಳನ್ನಾಡಿ ಯುವಕ ತೆರಳುವನು. ಶ್ರೀಮಂತ ನಾಚಿಕೆಯಿಂದ ತಾನು ಮಾಡಿದ ಹೆಡ್ಡತನಕ್ಕಾಗಿ ಮರುಗುವನು. ಅಲ್ಲಿಗೆ ನೃತ್ಯವು ಕೊನೆಗೊಳ್ಳುವುದು.

" ಇಷ್ಟು ತಯಾರಿ ನಮ್ಮಿರ್ವರಿಂದ ನಡಿಯುತ್ತಿರುವಾಗ ಮುಖ್ಯ ನಾಟಕ ಒಂದರ ತಯಾರಿ ಅತ್ತ ಕಡೆ ಭರದಿಂದ ನಡೆಯುತ್ತಿತ್ತು. ವಿದ್ಯಾರ್ಥಿಗಳ ಸಮ್ಮತಿಯಂತೆ ' ಶಾಕುಂತಲಾ ' ನಾಟಕವನ್ನು ಅಭಿನಯಿಸಬೇಕೆಂಬ ನಿರ್ಣಯವಾಗಿತ್ತು. ನಟನೆಗೆ ಸಾಕಷ್ಟು ನಟರನ್ನು ಆರಿಸುವದೊಂದೇ ಉಳಿದಿತ್ತು. ಆದರಲ್ಲಿ ಸ್ತ್ರೀ-ಪುರುಷರ ಪಾತ್ರವನ್ನು ಅವರವರೇ ಅಭಿನಯಿಸಬೇಕೆಂದು ಪ್ರಿನ್ಸಿಪಾಲರ ಒತ್ತಾಯ. ಇದನ್ನು ಕೇಳಿದ ಕೆಲವು ಉತ್ಸಾಹಿಗಳು ನಾಟಕದ ಸುದ್ದಿಯನ್ನೇ ತೊರೆದರು. ಇಡೀ ಕಾಲೇಜಿನ ವಿದ್ಯಾರ್ಥಿನಿಯರನ್ನು ಕೇಳುವಾಗಲೂ ನಟನೆಗೆ ಒಪ್ಪುವ ಅದಾವ ಯುವತಿಯೂ ಮುಂಬರಲಿಲ್ಲ. ಪ್ರಿನ್ಸಿಪಾಲರಿಗೂ ಬೇಸರವಾಯಿತು. ಕಡೆಗೆ ನನ್ನನ್ನು ಕರೆದು ಕೇಳಿದರು. ಶ್ರೀನಿವಾಸನ ಜತೆಯಲ್ಲಿ ನಟಿಸುವದಾದರೆ ಸರಿ ಎಂದೆ. ಅವನನ್ನು ಕರೆಸಿ ಕೇಳಿದರು. ಅವನು ಆನಂದದಿಂದ ಒಪ್ಪಿಕೊಂಡ. ನಂತರ ಉಳಿದ ತುಂಡು ಪಾತ್ರಗಳಿಗೆ ಕೆಲ ಹುಡುಗಿಯರು ಮುಂದಾದರು. ಹೀಗಾಗಿ ಮೊದಲ ವರ್ಷದ ಪ್ರಥಮ ಪ್ರಯತ್ನದಲ್ಲೇ ನಮಗೆ ಎರಡು ಹೊಣೆಗಳು ಸಿಕ್ಕಿದುವು. ದೇವರ ದಯೆಯೊಂದಿದ್ದರೆ ಯಶ ಗಳಿಸಬಹುದೆಂದು ದೃಢ ಮನಸ್ಕರಾಗಿ ನಮ್ಮ ಪ್ರಯತ್ನ ನಡೆಸಿದೆವು. "

" ನಮ್ಮ ಪ್ರಯತ್ನ ಭರದಿಂದ ಸಾಗುತ್ತಿತ್ತು. ಕಾಲೇಜಿನ ಆಟಪಾಠಗಳಲ್ಲೇ ಪ್ರಥಮಶ್ರೇಣಿ ಪಡೆದಿರುವ ನಾವು ಕಲಾಸೇವೆಯಲ್ಲೂ ಪ್ರಥಮರಾಗಿಯೇ ಮೆರೆಯಬೇಕೆಂಬ ಹುಮ್ಮಸು. ಅದರಲ್ಲೂ ನಮ್ಮ ಪಾಲಿಗೆ ಬಂದ

ನಾಟಕ ಪ್ರಣಯ ಸ್ವರೂಪ ಶಾಕುಂತಲಾ. ಬೇಡವೆಂದರೂ ಬೇಕೆನಿಸುವಷ್ಟು ಪ್ರಣಯ ಚಿತ್ರ. ಶ್ರೀನಿವಾಸನಿಗೂ ಮಿತಿಮೀರಿದ ಆನಂದ. ಶತ ಪ್ರಯತ್ನ ಪಟ್ಟಾದರೂ ಪ್ರೇಕ್ಷಕರಿಂದ 'ಬೇಷ್' ಅನಿಸಿಕೊಳ್ಳಬೇಕೆಂಬುದೆ ನಮ್ಮ ಮೊದಲ ಆಸೆ. ನನ್ನಲ್ಲಿ ಅದೆಷ್ಟೋ ಗಾಳಿ ಗೋಪುರಗಳು ಎದ್ದೇಳು ತ್ತಿದ್ದುವು. ಭವಿಷ್ಯಜೀವನದ ಹೊಂಗನಸುಗಳೂ ಕಣ್ಣಮುಂದೆ ನಿಲ್ಲುತ್ತಿ ದ್ದುವು. ರಂಗಮಂಟಪದಲ್ಲಿ ನಾನೂ ಶ್ರೀನಿವಾಸನೂ ಆಡಲಿರುವ ಪ್ರಣಯ ಚೇಷ್ಟೆ, ಮಧುರ ಸ್ಪರ್ಶದ ಆಲಿಂಗನಗಳು ಇವೇ ಮೊದಲಾದವುಗಳನ್ನು ನೆನ ಸಿದಾಗ ನನ್ನ ಮೈ ರೋಮಾಂಚನಗೊಳ್ಳುತ್ತಿತ್ತು. ಶ್ರೀನಿವಾಸ ಅದಾವ ಸಂಕೋಚವನ್ನೂ ತೋರ್ಪಡಿಸದೆ ಮನಮುಟ್ಟುವ ರೀತಿಯಲ್ಲಿ ನಟಿಸಲು ಅದೆಷ್ಟೋ ಬಾರಿ ನನ್ನೊಂದಿಗೆ ಆಡಿಕೊಂಡಿದ್ದ. ಆದರೆ ನಾನು ಅಂಜಿಕೆಯ ಮಟ್ಟಿಗೆ ಹೆದರಿರಲಿಲ್ಲ ಎಷ್ಟಾದರೂ ದಾಂಪತ್ಯ ಜೀವನದ ನಟನೆ, ಮುಂದಕ್ಕೆ ನಾನೂ ಸಂಸಾರ ಜೀವನಕ್ಕೆ ಧುಮುಕಲಿರುವವಳು; ಇಂದು ಆಡಿದ ಪ್ರೇಮಸಲ್ಲಾಪ, ವಿಧಿನಿಯಮದಿಂದ ಭಾವೀಜೀಮನದಲ್ಲೂ ಆದರೆ.... ಎಂಬ ಆಶಾಕಿರಣದ ಹೊಳಪು ನನ್ನ ಮನದಲ್ಲಿ ಆಗಿಂದಾಗ್ಗೆ ಮಿಂಚಿ ಮಾಯ ವಾಗುತ್ತಿದ್ದುವು.

"ನಮ್ಮ ನಾಟಕದ ದಿನವೂ ಸಮೀಪಿಸಿತು. ನಮ್ಮೆಲ್ಲ ತಯಾರಿಯೂ ನಿರಾತಂಕವಾಗಿ ಸಾಗಿತ್ತು. ನಾಟಕದ ದಿನ ಶ್ರೀನಿವಾಸ ಬೆಳಗಿನಿಂದಲೂ ನನ್ನ ರೂಮಿನಲ್ಲೇ ಇದ್ದ. ನಮಗಂದು ಇಲ್ಲದ ಹುರುಪು; ಉತ್ಸಾಹ. ಮಾತನಾಡಿ ಬಾಯಿ ಬತ್ತಿದಂತಿರಲಿಲ್ಲ. ಅತ್ತಿತ್ತ ಅಡ್ಡಾಡಿ, ಅದು ಇದು ಹುಡುಕುತ್ತ ನಲಿದಾಡಿದ ಆಯಾಸವಂತೂ ಇಲ್ಲ. ಅಂದು ಬೆಳಿಗ್ಗಿನಿಂದಲೂ ನಾವು ದುಷ್ಯಂತ–ಶಕುಂತಲೆಯರೇ ಆಗಿದ್ದೆವು. ನಮ್ಮ ಪಾತ್ರದ ತಿದ್ದುಪಡಿ ಮುಗಿದುದೇ ಇಲ್ಲ. ರಂಗಮಂಟಪದಲ್ಲಿ ನಮ್ಮ ಪಾತ್ರಸನ್ನಿವೇಶದ ಕೊನೆಯ ನಿರ್ಣಯವನ್ನು ಊಹಿಸುತ್ತಲೇ ಇದ್ದೆವು. ತಪ್ಪು-ಒಪ್ಪು, ಅಳುಕು-ಬಳುಕು ಗಳೆಲ್ಲವನ್ನೂ ಚರ್ಚಿಸುತ್ತಲೇ ಇದ್ದೆವು. ಹಲವಾರು ಹೊಸ ಸಲಹೆಗಳೊಂ ದಿಗೆ ನಮ್ಮ ನಿಲುವನ್ನು ಚಂದಗೊಳಿಸಿಕೊಂಡೆವು. ಪ್ರಣಯ ಸಂದರ್ಭದಲ್ಲಿ ಒಬ್ಬರನ್ನೊಬ್ಬರು ತಬ್ಬಿಕೊಳ್ಳುವಾಗ ಆಕರ್ಷಕ ಭಂಗಿಯಲ್ಲಿ ಕಂಡುಬರುವ ನಿಲುವನ್ನು ಕಂಡುಕೊಂಡೆವು. ಬೀಳ್ಕೊಳ್ಳುವಾಗ ಮಂದಹಾಸಪೂರಿತ ನಗೆ

ಯೊಡನೆ ಪ್ರೇಮವಿಯೋಗ ದೃಷ್ಟಿಯ ನಟನೆಯೊಂದನ್ನು ತರಬೇತಿ ಮಾಡಿ ಕೊಂಡೆವು. ನಂತರ ಪ್ರಣಯಿಯನ್ನು ಅಗಲಿದ ವಿರಹತಾಪವನ್ನು ಸಾರಿ ಕೊಳ್ಳುವ ದೃಶ್ಯದಲ್ಲೂ ಮನಕುಕ್ಕುವಂತಹ ನಟನೆಯನ್ನೀಯಲು ಶ್ರೀನಿವಾಸನ ಸಲಹೆಯನ್ನು ಕೇಳಿಕೊಂಡೆ. ಪ್ರೇಕ್ಷಕರೇ ಬೆರಗುಗೊಂಡು ಕಣ್ಣೀರು ಸುರಿ ಸುವ ರೀತಿಯಲ್ಲಿ ವಿರಹ ಸಂತಾಪವನ್ನು ತೋಡಿಕೊಳ್ಳಲು ಪ್ರಯತ್ನಿಸಿದೆ. ಅಂತೂ ನಮ್ಮಿರ್ವರ ಪಾತ್ರ ರಚನೆಯ ಸರ್ವ ಪ್ರಯತ್ನಗಳೂ ನಮ್ಮಿರ್ವ ರಿಂದಲೇ ನಡೆದಿತ್ತು. ಹೇಗಿದ್ದರೂ ನಮ್ಮ ಪಾತ್ರದಲ್ಲಿ ನಾವು ಕುಂದು ತೋರಗೊಡದೆ ಎಲ್ಲರ ಮನಸ್ಸನ್ನೂ ಕುಣಿಸಿ, ತಲೆದೂಗಿಸಿ ಬಿಡಬೇಕೆಂಬುದೇ ನಮ್ಮ ಅಭಿಮತ.

“ ಸಾಯಂಕಾಲವಾಯಿತು. ನಾವೆಲ್ಲ ಗ್ರೀನ್ ರೂಮ್ ಹೊಕ್ಕದ್ದಾ ಯಿತು. ಹೊರಗಿನಿಂದ ಕಾಲೇಜು ಚಟುವಟಿಕೆಯ ವರದಿ—ಬಹುಮಾನ ವಿತರಣೆ ಎಲ್ಲಾ ಸುರುವಾಯಿತು. ಸಭಾಂತ್ಯವಾದೊಡನೆ ಮೊದಲಿಗೆ ನಮ್ಮ ನೃತ್ಯಕೂಟ. ಆದ್ದರಿಂದ ‘ ಮೇಕಪ್ ’ ಮೊದಲು ನಮ್ಮದಾಗಬೇಕಿತ್ತು. ಮುಖಕ್ಕೆ ಬಣ್ಣ ಹಚ್ಚಿದ ನಂತರ ನೃತ್ಯಕ್ಕೆ ಒಪ್ಪುವ ಉಡಿಗೆಯನ್ನು ತೊಟ್ಟು ಶ್ರೀನಿವಾಸನಿಗೆ ನನ್ನ ವೇಷವನ್ನು ತೋರಿಸಲು ಮುಂದೋಡಿದೆ. ಅವನೂ ನನಗಾಗಿ ಕಾಯುತ್ತಿದ್ದ. ಅಂತೂ ನಮ್ಮನ್ನು ನಾವೇ ತಿದ್ದಿಕೊಳ್ಳುವಾಗ ಹೊರಗಿನ ಸಭೆ ಅಂತ್ಯವಾಯಿತು.

“ ಇನ್ನು ನಮ್ಮ ನೃತ್ಯ; ನಮ್ಮ ಕಿರುಪರಿಚಯವನ್ನು ಸಭಿಕರಿಗೆ ತಿಳಿಸಿ ನಾವಾಡುವ ನಾಟ್ಯಕಥೆಯನ್ನು ಓದಿ ಹೇಳಿದ ನಂತರ ಅಂಕದ ಪರದೆ ಸರಿ ಯಿತು. ಸಭೆಯಿದ್ದವರೆಲ್ಲರಿದ್ದಂತೆ ನಿಶ್ಶಬ್ದವಾಯಿತು. ಅಂತೂ ನಮ್ಮ ನಾಟ್ಯ ಯಶಸ್ವಿಯಾಗಿ ಕೊನೆಗೊಂಡಿತು.

“ ಪರದೆ ಬೀಳುವಾಗ ಕೈಚಪ್ಪಾಳೆಯ ಗದ್ದಲವೇ ಗದ್ದಲ. ಸಿಳ್ಳು ಹೊಡೆದು ಕಂಠ ಬಿರಿಯುವಷ್ಟು ಜೋರಾಗಿ ಬೊಬ್ಬೆ ಹೊಡೆದು ನಲಿಯುತ್ತಿ ದ್ದರು ಪ್ರೇಕ್ಷಕರು. ನಮಗೆ ಗೆಲುವಿನಾನಂದವಾಯಿತು. ನಮ್ಮ ಪ್ರಥಮ ಪ್ರಯತ್ನ ಯಶಸ್ವಿಯಾದುದೂ, ನನ್ನ ನಾಟ್ಯ—ಅವನು ಕಲಿಸಿದ ವಿದ್ಯೆ ಸಾರ್ಥಕತೆ ಹೊಂದಿದುದೂ ಮತ್ತಷ್ಟು ಹರ್ಷದಾಯಕವಾಗಿತ್ತು. ನಂತರ ನಮಗೆ ಹೆಚ್ಚಿನ ಬಿಡುವಿರಲಿಲ್ಲ. ಮುಂದಿನ ನಾಟಕದ ಪಾತ್ರ ತಯಾರಾಗ

ಬೇಕು. ಮಧ್ಯೆ ಅದಾವುದೋ ಇಂಗ್ಲೀಷು ಪ್ರಹಸನವಿದ್ದುದರಿಂದ ನಮಗೆ ಕೊಂಚ ಬಿಡುವು. ಆ ಸಮಯದಲ್ಲಿ ನಮ್ಮ ಮುಂದಿನ ನಾಟಕದ ವೇಷ ಭೂಷಣಗಳನ್ನು ಅತ್ಯಂತ ಬೆಡಗಿನಿಂದ ಅಳವಡಿಸಬೇಕು.

" ಹೊಸ ಶೃಂಗಾರ ಮುಗಿಯಿತು. ಅಂದಚೆಂದದ ನವಶೃಂಗಾರ ಸಾಧನಗಳಿಂದ ಶೃಂಗರಿತಳಾಗಿ, ನನ್ನ ರೂಪವನ್ನು ನಿಲುವುಗನ್ನಡಿಯಲ್ಲಿ ನೋಡಿದೆ. ನನ್ನನ್ನು ನಾನೇ ಗುರುತಿಸಲಾರದಾದೆ. ನನ್ನ ಹೆಚ್ಚಿನ ಗೆಳತಿಯರಿಗೂ ನನ್ನ ಗುರುತು ದೊರೆಯಲೇ ಇಲ್ಲವಂತೆ. ಅಷ್ಟು ಪ್ರಯತ್ನಪಟ್ಟಿದ್ದರು ನನ್ನನ್ನು ' ಮೇಕಪ್ ' ಮಾಡಿದವರು. ನನ್ನ ತಾಕೀತು ಅಂದರೆ ಅವರಿಗೆ ನವಸ್ಫೂರ್ತಿ ಬಂದೊದಗಿತ್ತು. ನನ್ನ ಬರೀ ಮಾತಿಗೆ ಅವರು ತನ್ನಿಂದ ಸಾಧ್ಯವಾದಷ್ಟು ಪ್ರಯತ್ನಿಸಿ, ಕೈಚಾತುರ್ಯವನ್ನುಪಯೋಗಿಸಿ ತನ್ನೆಲ್ಲ ಕಲಾರೂಪವನ್ನು ಕೊಟ್ಟು ಶೃಂಗರಿಸಿಬಿಟ್ಟಿದ್ದಾರೆ.

" ಶ್ರೀನಿವಾಸ ಜಗಜಗಿಸುವ ವಸ್ತ್ರಾಲಂಕಾರ ಭೂಷಿತನಾಗಿ, ದುಷ್ಯಂತನ ಪಾತ್ರಧಾರಿಯಾಗಿ, ರಾಜಠೀವಿಯಿಂದ ಹುಬ್ಬುಗಳನ್ನೇರಿಸಿಕೊಂಡೇ ನನ್ನೆಡೆಗೆ ಬಂದ. ಅವನ ಅಲಂಕಾರ ಗಂಭೀರವಾಗಿದ್ದಿತು. ನನ್ನಿದಿರುಗೊಳ್ಳಲು ಗ್ರೀನ್ ರೂಮಿನತ್ತ ಬಂದ. ರೂಮಿನಲ್ಲಿ ಇನ್ನೂ ಹಲವಾರು ಯುವತಿಯರಿದ್ದುದನ್ನು ಕಂಡು ಸ್ವಲ್ಪ ಹಿಮ್ಮೆಟ್ಟಿದ. ಆದರೆ ಅವನನ್ನು ತಿರಸ್ಕರಿಸುವವರಾರೂ ಅಲ್ಲಿರಲಿಲ್ಲ. ಅವನನ್ನು ಪ್ರತಿಯೋರ್ವಳೂ ಸ್ವಾಗತಿಸಿದಳು. ನಾನು ಕರೆಯಬೇಕಿದ್ದರೂ, ಅವರೇ ಮುನ್ನುಗ್ಗಿ ಕರೆತಂದಿದ್ದರು. ಅವನ ಶೃಂಗಾರವೂ ನನ್ನಂತೆ ಅತ್ಯಂತ ಸೌಂದರ್ಯಯುತವಾಗಿಯೇ ಆಗಿತ್ತು. ದುಂಡನಾಗಿ ಹೊಳೆಯುತ್ತಿರುವ ಮುಖ, ಪೌಡರ್ ಕಾಂತಿಯಿಂದ ಹೊಳೆಯುತ್ತಿತ್ತು. ಕಲೆಯಲ್ಲಿ ಹೊಳೆಯುವ ಕಿರೀಟ ಅವನ ಮುಖಕಾಂತಿಗೆ ಗೌರವದ ಶೋಭೆಯನ್ನಿತ್ತಿತ್ತು. ಮುಖದ ಕಿರುಮೀಸೆ ರಾಜಠೀವಿಯ ಪರಾಕ್ರಮದ ಗಂಭೀರತೆಯನ್ನು ಎತ್ತಿ ತೋರಿಸುತ್ತಿತ್ತು. ರಾಜಕುಮಾರನಂತೆ ರಾಜಠೀವಿಯಿಂದ ನಿಂತಿದ್ದ ನನ್ನ ಮನೋರಾಜ ದುಷ್ಯಂತನನ್ನು ಕಂಡು ನಾನೇ ಒಮ್ಮೆ ಬೆರಗಾದೆ. ನನ್ನ ಬಳಿಸಾರಿ ಬಂದು " ಹೇಗಾಗಿದೆ ವೇಷ " ಎಂದು ಕೇಳಿದ. ಅವನ ಆ ಹಾಸ್ಯಪೂರಿತ ನೋಟಕ್ಕೆ ಮತ್ತಷ್ಟೂ ವೈಮರೆತ ನಾನು ' ನನ್ನ ರಾಜ ' ಎಂದು ಅವನ ಗಲ್ಲಕ್ಕೆ ಮೃದುವಾಗಿ ಹೊಡೆದು ಅತ್ತ

ಹಾರಿದೆ. "ಅದೆಲ್ಲಾ ಹೊಸ ಹೊಸ ನಟನೆ ರಂಗಮಂಟಪದಲ್ಲಿ. ಈಗ ಇಲ್ಲಿ ನೋಡು. ನನ್ನ ವೇಷಭೂಷಣಗಳಲ್ಲಿ ಏನಾದರೂ ಹೆಚ್ಚು ಕಡಿಮೆ ಇದ್ದರೆ ತಿಳಿಸು. ನಾನಿಂದು ನಿನ್ನ ಮನಮೆಚ್ಚುವ ರಾಜನಾಗಬೇಕಾಗಿದೆ." ಎಂದು ಗಂಭೀರವಾಗಿ ಹೇಳಿದ. ನಾನೂ ನನ್ನ ಹಾಸ್ಯವನ್ನು ಮುಚ್ಚಿ ಅತ್ತ ಇತ್ತ ಬೆಳಕಿನಲ್ಲಿ ಅವನ ಮುಖವನ್ನು ತಿರುಗಿಸಿ, ಎಲ್ಲಿ ಏನಾಗಿದೆ ಎಂದು ಪರೀಕ್ಷಿಸ ತೊಡಗಿದೆ. ಸುಮ್ಮನೆ ಒಂದೆರಡು ಕಡೆ ವಸ್ತ್ರ ಹಾಯಿಸಿ, ಅಲ್ಲಿ ಇಲ್ಲಿ ಸ್ವಲ್ಪ ಪೌಡರ್ ಜಾಡಿಸಿದೆ. ನಂತರ ನನ್ನನ್ನು ತಿದ್ದಲು ತಿಳಿಸಿದೆ. ತಿರುತಿರುಗಿ ನೋಡಿದರೂ ನನ್ನಲ್ಲಿ ಅವನಿಗೆ ಏನೂ ಲೋಪ ತೋರಿ ಬರಲಿಲ್ಲ. "ಈಗ ನೀನು ಅಲೌಕಿಕ ಸುಂದರಿ. ಮೇನಕಾ ಪುತ್ರಿ ಶಾಕುಂತಲಾ ಎನ್ನುವುದರಲ್ಲಿ ಸಂದೇಹವೇ ಇಲ್ಲ" ಎಂದು ಹಾಸ್ಯ ಮಾಡಿದ. ಆಗ ಅವನ ಕಣ್ಣು ನನ್ನ ತಲೆಯ ಮೇಲಿದ್ದ ಸಂಪಗೆಯೆತ್ತ ಹೊರಳಿತು. ಆ ಶೃಂಗಾರ ಅವನಿಗೆ ಹಿಡಿಸಲಿಲ್ಲ. ನನ್ನ ಸಿರಿ ಮುಡಿಯಲ್ಲಿ ಮಲ್ಲಿಗೆ ದಂಡೆಯೇ ರಾರಾಜಿಸಬೇಕೆಂದು ಮಲ್ಲಿಗೆಯ ಚೆಂಡೊಂದನ್ನು ತಂದು ತಾನೇ ಮುಡಿಸಿದ. "ಈಗ ತೃಪ್ತಿಯಾಯಿತೇ ?" ಎಂದು ಕೇಳಿದೆ. ಹೂಂಕಾರದೊಂದಿಗೆ ತಲೆಯಲ್ಲಾಡಿಸಿದ.

"ನಾಟಕ ಆರಂಭವಾಯಿತು. ನಾನು ರಂಗಮಂಟಪದಲ್ಲಿ ಸಖಿಯರೊಂದಿಗೆ ಆಟಕ್ಕೆ ತೊಡಗಿದ್ದೆ. ಅತ್ತ ಕಡೆಯಿಂದ ಮೃಗಯಾವಿಹಾರಿಯಾದ ಶ್ರೀನಿವಾಸ ಪ್ರವೇಶಿಸುತ್ತಲಿದ್ದಾನೆ. ಆಗ ನನಗೂ ಅವನಿಗೂ ಪರಸ್ಪರ ಪರಿಚಯವಿರುವುದಿಲ್ಲ. ನಮ್ಮ ಆಟದಲ್ಲೇ ಮಗ್ನರಾಗಿರಬೇಕು. ಆದರೂ ರಂಗಕ್ಕೆ ಬಂದ ದುಷ್ಯಂತನನ್ನೊಮ್ಮೆ ಕಣ್ಣೆತ್ತಿ ನೋಡಬೇಕೆಂಬ ಆಶೆ ನನಗೆ. ಅಂತೆಯೆ. ಕುಳಿತಲ್ಲಿಂದಲೇ ಕಡೆಗಣ್ಣ ನೋಟವೊಂದನ್ನು ಅತ್ತ ಹಾಯಿಸಿದೆ. ಯಾರಿಗೂ ತಿಳಿಯಲಾರದು ಎಂದು ನನ್ನ ಭಾವನೆ. ಆದರೆ ಪ್ರೇಕ್ಷಕರು ಕಾಣದೆ ಬಿಟ್ಟಾರೆ ? ಅಷ್ಟೇ ತಡ. ನಗೆಗೂ ಕರತಾಡನಕ್ಕೂ ಪ್ರಾರಂಭವಾಯಿತು. ಇದೇ ರೀತಿ ಪ್ರಥಮದಿಂದಲೇ ಆಕರ್ಷಕ ರೀತಿಯಲ್ಲಿ ಪ್ರೇಕ್ಷರಿಗೆ ಸ್ಫೂರ್ತಿ ಬಂದಂತಾಗಿ ಕೊನೆಯ ತನಕವೂ ಅವರು ಮೆಚ್ಚಿ ನಲಿದಾಡುವಂತಾಗಿತ್ತು.

"ನಾಟಕ ಭಾರಿ ಯಶಸ್ವಿಯಾಯಿತು. ಪ್ರೇಕ್ಷಕರ ಆನಂದ ಹೇಳತೀರದು. ನಾವು ಪ್ರಣಯ ಸಲ್ಲಾಪಗೈಯ್ಯುತ್ತಿದ್ದಾಗ ಅವರ ಕುತೂಹಲಕ್ಕೆ

ಮೇರೆಯೇ ಇರಲಿಲ್ಲ. ಶ್ರೀನಿವಾಸನ ಅಸಂಕೋಚ ನಟನೆಯು ಎಂತಹವರ ಮನಸ್ಸನ್ನೂ ಸೂರೆಗೊಳ್ಳಲೇ ಬೇಕು. ಅವನ ತೆಕ್ಕೆಯಲ್ಲಿ ಬಿದ್ದ ನನಗೆ ಏನೇನೋ ಕಲ್ಪನೆಗಳುಂಟಾಗುತ್ತಿದ್ದುವು. ಆದರೆ ನಾನಿರುವುದು ನಾಟಕ ರಂಗ ದಲ್ಲೆಂಬ ವಿವೇಕ ನನ್ನನ್ನು ಕಾಪಾಡಿತ್ತು. ಪ್ರೇಮದ ಚೆಲ್ಲಾಟವೆಲ್ಲ ಮುಗಿ ದಾದ ನಂತರ ದುಷ್ಯಂತನು ರಾಜಧಾನಿಗೆ ತೆರಳುವ ಸಂದರ್ಭ. ಅವನ ಅಗಲಿಕೆಯಿಂದ ನನ್ನ ಸಂತಾಪ. ನನ್ನ ಮತ್ತು ಅವನ ನಟನೆಯ ಪರೀಕ್ಷಾ ಕಾಲವು ಎನ್ನಬೇಕು. ನಮ್ಮ, ಕೂಡಿದ ಪ್ರಯತ್ನವನ್ನೇ ಅಲ್ಲಿ ಪ್ರಯೋ ಗಿಸಬೇಕಾಗಿ ಬಂದಿದೆ. ಆದ್ದರಿಂದ ಅವನು ನನ್ನನ್ನು ಬೀಳ್ಕೊಳ್ಳಲು ಬರು ವಾಗ ಸಂತಾಪ ಸೂಚಕವಾದ ಅಭಿನಯಕ್ಕೆ ತೊಡಗಿದೆ. ಅವನ ಕಾಲಿಗೆ ಬಿದ್ದು ಅವನನ್ನು ತಬ್ಬಿಕೊಂಡು ಕಣ್ಣೀರಿಳಿಸುತ್ತಾ ನುಡಿದ ಮಾತು ದುಃಖೋದ್ವೇಗದಿಂದ ಅಳುತ್ತಿರುವಂತೆ ಆಗಿತ್ತಂತೆ. ಅವನು ತನ್ನ ಪ್ರೇಮದ ಕುರುಹಾಗಿ ಅಭಿಜ್ಞಾನದ ಉಂಗುರವನ್ನು ನನ್ನ ಬೆರಳಿಗೆ ತೊಡಿಸುತ್ತಿದ್ದಾಗ ನನ್ನ ದುಃಖವನ್ನು ಕಂಡ ಕೆಲವು ಪ್ರೇಕ್ಷಕರ ಕಣ್ಣಲ್ಲಿ ನೀರೂರುತ್ತಿತ್ತು. ಸಭೆಯು ಮೌನದಿಂದಿತ್ತು.

" ಶಾಕುಂತಲಾ ದುಷ್ಯಂತನಾಸ್ಥಾನಕ್ಕೆ ಹೋಗಿದ್ದಾಗ ಅವನು ಕಣ್ಣೆ ತ್ತಿಯೂ ನೋಡದೆ ತಿರಸ್ಕರಿಸಿದಾಗಲೂ ನಾನು ದುಃಖದಿಂದ ನಮ್ಮ ಪ್ರಣಯದ ನೆನಪು ಮಾಡಿಕೊಡುವಾಗಲೂ ಅವನು ನನ್ನನ್ನೇ ನಿಂದಿಸಿದ. ಇದನ್ನು ಸಹಿಸಲಾರದೆ ನಾನು ವಿರಹ ವೇದನೆಯಿಂದ ಪರಿತಪಿಸುತ್ತಿದ್ದೆ. ನನ್ನೊಡನೆ ಬಂದ ವಟು, ನನ್ನ ಪರವಾಗಿ ವಾದಿಸುವನು. ಕಣ್ಣೀರಿಳಿಸುತ್ತಾ ನಾನು ತಲೆ ತಗ್ಗಿಸಿ ನಿಂತಿದ್ದೆ. ಆಗ ಮೆಲ್ಲನೆ ಪ್ರೇಕ್ಷಕರ ಕಡೆಗೆ ದೃಷ್ಟಿ ಹಾಯಿಸಿದೆ. ಎದುರು ಕುಳಿತ ಮಹಿಳಾಮಣಿಯೋರ್ವಳ ಕಣ್ಣಿಂದ ಅವಳಿಗರಿವಿಲ್ಲದಂತೆ ಕಂಬನಿಗಳು ಇಳಿಯುತ್ತಿದ್ದುವು. ಅವರನ್ನು ಕಂಡು ನನಗೂ ಬೇಸರ ವಾಯಿತು. ನಮ್ಮ ನಟನೆಗಾಗಿ ಅವರು ದುಃಖಕ್ಕೊಳಗಾದರಲ್ಲ ಎಂದು ಬೇಸರ.

" ಕೊನೆಯ ದೃಶ್ಯಕ್ಕೆ ಮೊದಲು ಪ್ರೇಕ್ಷಕ ವೃಂದದಲ್ಲಿದ್ದ ಓರ್ವ ಸರ ಕಾರಿ ಅಧಿಕಾರಿಗಳು ಪ್ರಿನ್ಸಿಪಾಲರೊಂದಿಗೆ ರಂಗಭೂಮಿಯನ್ನೇರಿದರು. ಅವರಿಗೆ ನಾಟ್ಯ—ಆರಿಸಿದ ಕತೆ ಎರಡೂ ಮೆಚ್ಚಿಗೆಯಾಗಿತ್ತಂತೆ. ಅದರಲ್ಲಿ

ಶಾಕುಂತಲಾ—ದುಷ್ಯಂತರ ಪಾತ್ರ ಇನ್ನೂ ಉತ್ತಮವಾಗಿದೆ ಎಂದು ನಮ್ಮನ್ನು ಪ್ರಶಂಸಿಸಿದರು. ಆದ್ದರಿಂದ, ಅವರು ಮೆಚ್ಚುಗೆಯನ್ನು ತೋರಿಸಿ ಆ ಎರಡು ಪಾತ್ರಧಾರಿಗಳಿಗೆ ತಮ್ಮ ಎರಡು ಉತ್ತಮ ಪದಕಗಳ ಬಹು ಮಾನವನ್ನು ಕೊಡಬೇಕಾಗಿ ಅಧ್ಯಕ್ಷರಲ್ಲಿ ಕೇಳಿಕೊಂಡರು. ಅವರು ಅವನ್ನು ನಮಗೀಯುತ್ತಾ ಉತ್ಕೃಷ್ಟವಾಗಿ ಅಭಿನಯಿಸಿ, ಕಲಾಕ್ಷೇತ್ರದಲ್ಲಿ ಸರ್ವರನ್ನು ಮೆಚ್ಚಿಸಿದ ನಮಗೆ ಮುಂದೆಯೂ ನಮ್ಮ ಪ್ರಯತ್ನಗಳು ಯಶಸ್ವಿ ಹೊಂದಿ ಕಲಾಭೂಮಿಯ ಮಾರ್ಗದರ್ಶಕರಾಗುವಂತೆ ಹಾರೈಸಿದರು.

"ನಾಟಕ ಮುಗಿಯುವಾಗ ಹೊರಗಡೆ ಗದ್ದಲವೇ ಗದ್ದಲ. ಪ್ರತಿ ಯೊರ್ವನ ಬಾಯಲ್ಲೂ ಹರ್ಷೋದ್ಗಾರ. ಅದರಲ್ಲೂ ಮುಖ್ಯ ಪಾತ್ರಧಾರಿ ಗಳಾದ ನಮ್ಮಿಬ್ಬರನ್ನು ಪ್ರಶಂಸಿಸುವದಕ್ಕೇನೂ ಕಡಿಮೆಯಿರಲಿಲ್ಲ. ಎಲ್ಲರೂ ಉತ್ತಮವಾಗಿದೆ ಎನ್ನುವವರೇ. ನಾವು ಗ್ರೀನ್ ರೂಮು ಹೊಕ್ಕಬೇಕಿದ್ದರೆ ನಮ್ಮ ಹಲವಾರು ಗೆಳತಿಯರು ಓಡಿಬಂದು ಹಾಡಿ ಹರಸಿ, ಶುಭ ಕೋರಿ ಹೋದರು. ನಾನು ಶ್ರೀನಿವಾಸನನ್ನು ಕರೆದು 'ಹೇಗೆ ?' ಎಂದು ಕೇಳಿದೆ. 'ಎಲ್ಲ ನಿನ್ನಿಂದ ಈ ಶ್ರೇಯಸ್ಸು' ಎಂದು ಹೊಗಳಿದ. ಮತ್ತೆ ನನ್ನನ್ನು ರೂಮು ಮುಟ್ಟಿಸಿ ಮುಂದೆ ಹೋದ.

ಅಂತೂ ನಾಟಕದಲ್ಲಿ ನಮಗೆ ಯಶಸ್ಸು ದೊರೆತಿದೆ. ಪ್ರಿನ್ಸಿಪಾಲರಿಗೆ ಅಮಿತಾನಂದವಾಗಿತ್ತು. ಇಡೀ ಕಾಲೇಜಿನ ಕಣ್ಣಿಗೆ ನಾವು ರತ್ನಗಳಾದೆವು. ಪ್ರತಿಯೊರ್ವನೂ ನಮ್ಮನ್ನೇ ಹಾರೈಸಿ ಕೊಂಡಾಡುವರು. ನಾವೀರ್ವರೂ ಕಾಲೇಜಿನ ಎರಡು ಕಣ್ಣುಗಳಾದೆವು.

## ೩

ಬಿಸಿಲೇರಿ ಬರುತ್ತಲಿದ್ದು ನೆಲ ಕಾವೇರಲಾರಂಭಿಸಿತು. ಮಂದಮಾರು ತನು ಓಲಾಡಿಕೊಂಡು ಬಂದು ಮೈ ಸೋಂಕಿ ಹೋಗುತ್ತಿದ್ದರೂ, ಅವನೊ ಡಲು ಬಿಸಿಲ ಕಾವಿಗೆ ಬೆಚ್ಚಗಾಗಿರಲಿಲ್ಲ. ಚಿಲಿಪಿಲಿಗುಟ್ಟುತ್ತಾ ಗಲಿಬಿಲಿ

ಮಾಡಿಕೊಂಡಿದ್ದ ಹಕ್ಕಿಗಳೆಲ್ಲ ಇದೀಗ ದೂರದ ಬಯಲತ್ತ ಮೇವಿಗಾಗಿ ತೆರಳಿದ್ದುವು. ಗೂಡಲ್ಲಿರುವ ಒಂದೆರಡು ಮರಿಪಕ್ಷಿಗಳು ಮಾತ್ರ ಮೇವಿಗಾಗಿ ಹಾರಿದ ತಾಯಿಯನ್ನು ಕರೆಯುತ್ತಿದ್ದುವು. ಮನೆಯ ಪಕ್ಕದ ಮಾರ್ಗದಲ್ಲಿ ಜನಸಂಚಾರ ಕಮ್ಮಿಯಾಗಿತ್ತು. ಆಗೊಂದು ಈಗೊಂದು ಎತ್ತಿನ ಗಾಡಿಗಳು ಮಾತ್ರ ಗಡಗಡ ಶಬ್ದ ಮಾಡುತ್ತ ಸಂಚರಿಸುತ್ತಿದ್ದುವು. ಹುಚ್ಚನೋರ್ವನು ನಿರ್ಜನವಾದ ಮಾರ್ಗದಲ್ಲಿ ತನ್ನ ಸ್ವಾತಂತ್ರ್ಯವನ್ನು ತೋರಿಸುತ್ತಾ, ಓಗೊಟ್ಟು, ಬೊಬ್ಬೆ ಹೊಡೆಯುತ್ತಾ ಮುಂದೆ ಸಾಗಿದ್ದ. ಮನೆಯಂಗಳದ ಕಾರಂಜಿ ಕಟ್ಟೆಯಲ್ಲಿ ಹಳದಿ ಗುಲಾಬಿ ಹೂವೊಂದು ಬಿರಿದರಳಿ ಸೂರ್ಯ ರಶ್ಮಿಗೆ ಮೈಯೊಡ್ಡಿ ನಿಂತಿತ್ತು. ತೋಟದಲ್ಲೇ ಹಾರಾಡುತ್ತಲಿದ್ದ ತುಂಬಿಯೊಂದು ಮಕರಂದವನ್ನು ಹೀರುತ್ತಾ ಗುಲಾಬಿ ಗಿಡದತ್ತ ಸುಳಿಯಿತು. ಕಂಪ ನೀಯುತ್ತ ತಲೆಯೆತ್ತಿ ಶೋಭಿಸುತ್ತಿರುವ ಗುಲಾಬಿಯ ದಿಟ್ಟತನವು ತುಂಬಿಯ ದೃಷ್ಟಿಗೆ ಬಿದ್ದಿತು. ಸಂತಸದಿಂದ ಝೇಂಕಾರಗೈಯುತ್ತ ತುಂಬಿಯು ಪುಷ್ಪದ ಮೇಲೆರಗಿತು. ಆದರೆ ಅದರ ಮೇಲೆ ಕುಳಿತು ಅದರ ತನಿರಸವನ್ನು ಹೀರುವ ಕಾರ್ಯಕ್ಕೆ ಮಾತ್ರ ಅದು ಮುಂದಾಗಲಿಲ್ಲ. ಬಹುಶಃ ಆ ಕುಸುಮ ಸೌಂದರ್ಯ, ತುಂಬಿಯ ಮನ ಸೆಳೆದು, ಅದರಿಂದ ಕೆಡಿಸಬಾರದೆಂದು ಎನಿಸಿರಬೇಕು. ಸಂತೋಷದಿಂದ ಮತ್ತೂ ಮತ್ತೂ ಆ ತುಂಬಿಯು ಆ ಹೂವನ್ನೇ ಸುತ್ತುತ್ತಾ ಹಾರಾಡುವದರಲ್ಲಿತ್ತು ಇದೂ ಒಂದು ಪ್ರಪಂಚ ಲೀಲೆಯಾಗಿರಬೇಕು. ಎಷ್ಟೇ ಸೌಂದರ್ಯಯುತ ಪುಷ್ಪವನ್ನಾದರೂ ಲೆಕ್ಕಿಸದೆ ಮಕರಂದವನ್ನೇ ಹೀರುತ್ತಿರುವ ತುಂಬಿಯು ಈ ಒಂದು ಪುಷ್ಪಕ್ಕೆ ಮಾರು ಹೋದುದು ವಿಚಿತ್ರವಲ್ಲವೆ ? ಆದರೂ ಅದರ ಸಂತಸಕ್ಕೆ ಎಣೆಯಿರಲಿಲ್ಲ. ಅಷ್ಟರಲ್ಲಿ ಸುಮ್ಮನೆ ಗಾಳಿಯೊಂದು ಸೋಂಕಲು, ಆ ಹೂವು ವಾಲಿಕೊಂಡು ಇನ್ನೊಂದು ಗಿಡದಲ್ಲಿನ ಹೂವನ್ನು ಮುದ್ದಿಕ್ಕಿತು. ದುಂಬಿಯು ಅವೆರಡರ ಸುತ್ತಿನಲ್ಲೇ ಹಾರಾಡುತ್ತಿತ್ತು. ಮತ್ತೊಂದು ದುಂಬಿಯು ಮನೆಯೊಳಗೆ ಹೊಕ್ಕಿತು. ತನ್ನ ಸ್ವೇಚ್ಛಾಚಾರವನ್ನು ತೋರಿಸುತ್ತಾ, ಝೇಂಕಾರಗೈಯುತ್ತಾ ಮನೆಯಿಡೀ ತಿರುಗಿ, ಶಾಂಭವಿಯ ಮುಖದತ್ತ ಹಾರಾಡಿತು. ಶಾಂಭವಿ ಸ್ವಲ್ಪ ಹೆದರಿಕೊಂಡು, ಶೂ, ಶೂ, ಎಂದು ಬಿಸುಸುಯ್ದರು. ತುಂಬಿ ಹಾರಿ ಹೊರಹೋಯಿತು.

" ಏನಮ್ಮ, ಬೇಸರ ಬಂದಿತೇ ? " ತಾರಾ ಪ್ರಶ್ನಿಸಿದಳು.

" ಬೇಸರವೇನಿಲ್ಲವಮ್ಮ, ತುಂಬಿಯೊಂದು ಮುಖದ ಮೇಲೇರಿ ಬಂದು ಬಿತ್ತು. ಅದಕ್ಕೆ ಶೂ, ಶೂ ! ಅಂದೆ. "

" ಹೌದಮ್ಮ, ಅಷ್ಟು ಚಿಕ್ಕ ತುಂಬಿಯೂ ಒಂದೊಂದು ಸಲ ಎಷ್ಟು ಹೆದರಿಸಿ ಬಿಡುತ್ತದೆ. ನಾನೀಗ ಹೇಳುತ್ತಿದ್ದ ಕಥೆಯಲ್ಲೇ ಅಂಥ ಒಂದು ಪ್ರಸಂಗ ನನಗೂ ಒದಗಿತ್ತು. ನಾನೂ ಶ್ರೀನಿವಾಸನೂ ಒಂದು ಬಾರಿ ಒಟ್ಟಿಗೆ ತಿರುಗಾಡಿಕೊಂಡು ಹೋಗಿ ಒಂದು ಹೂದೋಟದಲ್ಲಿ ಸಂಚಿದ್ದವು. ಅವನು ಒಂದು ಬದಿಯಲ್ಲಿ ನಿಂತು ಸೃಷ್ಟಿಯ ಸೌಂದರ್ಯದ ಸವಿಯನ್ನು ಸವಿಯುತ್ತಿದ್ದ. ನಾನು ಹೂಗಳನ್ನು ನೋಡುತ್ತ ಸ್ವಲ್ಪ ದೂರ ಸರಿದಿದ್ದೆ. ನಾನು ಬಗ್ಗಿಸಿ ನೋಡಿದ ಒಂದು ಹೂವಿನೊಳಗಿಂದ ಒಂದು ದುಂಬಿ ಹಾರಿ ನನ್ನ ಮುಖಕ್ಕೆ ಅಪ್ಪಳಿಸಿತು. ಅಷ್ಟರಲ್ಲಿಯೇ ಹೋಯಿತೇ ಅದು ? ಇಲ್ಲ. ಮತ್ತು ಹಿಂತಿರುಗಿ ಬಂದು ನನ್ನ ಕಣ್ಣು ಕುಕ್ಕುವಂತೆ ಸುಳಿದಾಡಿತು. ನನಗೆ ಬೆದರಿಕೆಯಿಂದ ತಲೆ ತಿರುಗಿದಂತಾಯಿತು. ಬೊಬ್ಬಿರಿದು ಶ್ರೀನಿವಾಸನನ್ನು ಕರೆದೆ. ಅವನು ಗಾಬರಿಯಿಂದ ಓಡೋಡಿ ಬಂದ. ನಡೆದುದನ್ನು ಹೇಳಲು ಬಾಯೇ ಬರಲಿಲ್ಲ. ಪುನಃ ದುಂಬಿಯು ಮುಂಬರಲು ಅದನ್ನು ಅವನೇ ದೂರ ಓಡಿಸಿದ. ಮತ್ತೆ ಚೇಷ್ಟೆ ಮಾಡಲಾರಂಭಿಸಿದ. "

" ಹೌದಮ್ಮ. ಅದು ಹಾರಿಹೋದ ನಂತರ ನಮಗೆ ಹಾಸ್ಯ. ಆದರೆ ಅದು ಹತ್ತಿರ ಬಂದಾಗ ಮಾತ್ರ ಜೀವ ಹೋದಷ್ಟು ಸಂಕಟ " ಎಂದು ಒಂದು ನಿಟ್ಟುಸಿರು ಹರಿಸಿದರು.

" ಏನಮ್ಮ, ಕಥೆ ಕೇಳಿ ಬೇಸರವಾಗುತ್ತಿದೆಯೇ ? "

" ಛೇ ! ಕಥೆ ಕೇಳಿ ಬೇಸರವೆ ! ಇನ್ನೂ ಮುಂದೆ ಮುಂದೆ ಕೇಳೋಣ ವೆಂದು ಕಿವಿದಾವರೆ ಅರಳುತ್ತಿದೆ. ಅದೇನೋ ದೊಡ್ಡ ಕಾದಂಬರಿಯನ್ನೇ ದೊಡ್ಡ ಪುರಾಣವನ್ನೇ ಕೇಳಿದಂತಾಗುತ್ತದೆ ನನಗೆ. ನಿಮಗೆ ಮಾತ್ರ ಬೇಸರ ವಾಗದಿದ್ದರೆ ಮುಂದರಿಸಿ ಸುಮ್ಮನೆ ನಿಮಗೆ ತ್ರಾಸ ಬೇಡ. ನನಗೆ ಇನ್ನೂ ಇನ್ನೂ ಕೇಳುವ ಎಂದಾಗುತ್ತದೆ "

"ನಮ್ಮ ಅಂದಿನ ಅಭಿನಯದ ಮೆಚ್ಚುಗೆಗಾಗಿ ನಮಗೀರ್ವರಿಗೂ ಕಾಲೇಜಿನ ಪರವಾಗಿ ಸುವರ್ಣ ಪದಕವು ಬಹುಮಾನವಾಗಿ ದೊರೆಯಿತು. ಅಲ್ಲದೆ

ನಾಟಕ ನೋಡಿದ ಪ್ರತಿಯೊರ್ವನಿಂದಲೂ ಶುಭಾಶಯಗಳು ದೊರೆತುವು. ಅಲ್ಲಿಗೆ ಆ ವರ್ಷದ ಕಾರ್ಯಕಲಾಪಗಳು ಮುಗಿದುವು.

"ನನ್ನ ಮತ್ತು ಶ್ರೀನಿವಾಸನ ಸ್ನೇಹವು ನಿಕಟವಾಗುತ್ತಲೇ ಇರಬೇಕಷ್ಟೆ. ಅಂತೆಯೆ ನಾನೂ ಪ್ರಯತ್ನಿಸುತ್ತಿದ್ದೆ. ಆದರೆ ನಾನೆಷ್ಟು ಅವನನ್ನು ಹತ್ತಿರ ಸೆಳೆಯಲು ಪ್ರಯತ್ನಿಸುತ್ತಿದ್ದೆನೋ ಅಷ್ಟೇ ದೂರ ಸರಿಯಲು ಅವನು ಪ್ರಯತ್ನಿಸುತ್ತಿದ್ದ. ಹಲವಾರು ಗೆಳೆಯರು ಹಾಸ್ಯ ಮಾಡುತ್ತಿದ್ದರು. ಇಲ್ಲದ ಅಡ್ಡಹೆಸರು ಹಿಡಿದು ಕರೆದು ಕುಚೇಷ್ಟೆ ಮಾಡುತ್ತಿದ್ದರು. ಹೆಚ್ಚಿನಾಂಶ ಇದಕ್ಕಾಗಿ ಅವನು ಬೆದರಿ ನನ್ನಿಂದ ದೂರವಿರಲು ಪ್ರಯತ್ನಿಸುತ್ತಿದ್ದ.

"ಅವನೇಕೆ ಹಾಗೆ ವರ್ತಿಸುತ್ತಾನೆಂದು ಅವನಿಂದಲೆ ಹೇಳಿಸಿಕೊಳ್ಳಬೇಕೆಂದು ಒಂದು ದಿನ ಹರಟೆ ಹರಟುತ್ತಿರುವಾಗ ಪ್ರಸ್ತಾಪಿಸಿದೆ. ಕಾರಣವೆಲ್ಲವನ್ನೂ ಮರೆಮಾಜದೆ ಹೇಳಿದ. ನನ್ನ ಊಹನೆ ನಿಜವಾಗಿತ್ತು. ನನಗವನ ಹೇಡಿತನವನ್ನು ಕಂಡು ಬೇಸರವಾಯಿತು. ಆದರೆ ಒಂದು ತರದಲ್ಲಿ ಅವನ ಧೋರಣೆಯೇ ಸರಿಯಾಗಿತ್ತು. ನನಗೆ ಅವನ ಅಧಃಪತನ ಸರಿಬೀಳದ್ದರಿಂದ ಧೈರ್ಯದ ದಿವ್ಯ ಹಾದಿಯನ್ನು ಹಿಡಿಯಲು ಹುರಿದುಂಬಿಸಿದೆ. ಯಾರ ಮಾತಿಗೂ ನಾವು ಬೆದರಬಾರದು. ನಮ್ಮಿಚ್ಛೆಯಂತೆ ನಡೆಯುವಷ್ಟು ವ್ಯಕ್ತಿಸ್ವಾತಂತ್ರ್ಯವಿರುವಾಗ ಅವರೇನೇ ಹೇಳಲಿ, ಅದೆಲ್ಲ ಹೊಟ್ಟೆಕಿಚ್ಚಿನಿಂದಲ್ಲದೆ ಇನ್ನಾವುದೂ ಅಲ್ಲದಿರುವಾಗ, ನಮ್ಮ ಮನಸ್ಸಿನ ಮಾರ್ಗವನ್ನೇ ನಾವು ಅಕ್ರಮಿಸಬೇಕೆಂದೂ, ನಾವು ಜೀವಿಸಲು ನಮ್ಮ ಮನಃಸ್ಥೈರ್ಯವಗತ್ಯವಲ್ಲದೆ ಇನ್ಯಾರಾರೋ ಅಂದ ವ್ಯಂಗ ನುಡಿಗಳಿಗೆ ತಲೆಬಾಗಬಾರದೆಂದೂ ಸವಿ ನುಡಿಗಳನ್ನಾಡಿ, ಅವರ ಕಂದಿದ ಮನವನ್ನು ಅರಳಿಸಿ ಒಲಿಸಿಕೊಂಡೆ."

"ಒಂದು ದಿನ ನನಗೊಂದು ಪತ್ರ ಬಂದಿತ್ತು. ಅದೊಂದು ಪ್ರೇಮ ಪತ್ರ! ಅದಾರೋ ನೋಡಲಾರದ ಕುಹಕಿಗಳು ಅದನ್ನು ಬರೆದಿದ್ದರು. ಪತ್ರಾಂತ್ಯದಲ್ಲಿ 'ಶ್ರೀನಿವಾಸ' ಎಂದು ಸಹಿ ಮಾಡಿತ್ತು, ಇದು ನನ್ನನ್ನು ಮತ್ತು ಶ್ರೀನಿವಾಸನನ್ನು ಅವಮಾನಗೊಳಿಸಲು ಮಾಡಿದ ಉಪಾಯ! ಪತ್ರ ಓದಿದೆ. ಅಲ್ಲಸಲ್ಲದ ಅಸಹ್ಯ ವಿಚಾರಗಳನ್ನು ಸೃಷ್ಟಿಸಿ ಬರೆದಿದ್ದಾರೆ. ಅದೇನು ಮಾತ್ಸರ್ಯವೋ? ಅದೇನು ಮೂರ್ಖತನವೋ? ಅಬ್ಬ! ಎಂಥ ಹುಡುಗರಿದ್ದಾರೆ, ಇಬ್ಬರ ಗೆಳೆತನ ಕಂಡು ಇಷ್ಟೊಂದು ತಾತ್ಸಾರ.

ನಮ್ಮ ನಡತೆ ಕಂಡು ಅವನ ಕಣ್ಣು ಕುಕ್ಕಿ ಹೋಗಿರಬೇಕು. ಮತ್ಸರವು ಕಟ್ಟೆಯೊಡೆದು ಪತ್ರರೂಪಕ್ಕೆ ಹರಿದಿತ್ತು. ಅಹಹಾ ! ನಾಗರಿಕ ಪ್ರಪಂಚದ ಭಾವೀ ಜನಾಂಗವೇ !! ನಾನಿದಕ್ಕಾಗಿ ಬೇಸರಿಸಲಿಲ್ಲ. ಆದರೆ ನನ್ನೀ ಗೆಳೆಯನೋರ್ವನ ಮೂರ್ಖತನಕ್ಕಾಗಿ ಮಾತ್ರ ಮನ ನೊಂದಿತು. ಅದೇ ದಿನ ಪತ್ರವನ್ನು ಶ್ರೀನಿವಾಸನ ಕೈಗಿತ್ತೆ. ಅವನೂ ಒಂದು ಪತ್ರವನ್ನು ಕಿಸೆಯಿಂದ ತೆಗೆದು ನನ್ನ ಕೈಗಿತ್ತ. ನೋಡುವುದೇನು ? ಅದೇ ಬರಹದ ಇನ್ನೊಂದು ಪತ್ರ ! ತುದಿಯಿಂದ ಬುಡತನಕ ಓದಿದೆ. ಕೊನೆಯಲ್ಲಿ ದಸ್ಕತ್ತನ್ನೂ ನೋಡಿದೆ. ಆಶ್ಚರ್ಯ. ಇಂತಿ ನಿನ್ನ ಪ್ರಿಯತಮೆ, ‘ ತಾರಾ ’ ಎಂದು ಬರೆದಿತ್ತು. ಅಬ್ಬ ! ಇದೂ ಇನ್ನೊಂದು ಕುಟಿಲತೆಯೆ ! ಯಾರೋ ಒಬ್ಬನ ಮೂಢತನ ಎರಡು ಮುಖದಿಂದ ಬಯಲಾಯಿತು. ನನ್ನ ಪತ್ರದಲ್ಲಿದ್ದಂತಹ ಅಸಹ್ಯ ನುಡಿಗಳೇ ಅದರಲ್ಲೂ ತುಂಬಿ ಹೋಗಿದ್ದವು. ಅಲ್ಲದೆ ಶ್ರೀನಿವಾಸನಿಗೊಂದು ಜಾಗ್ರತೆಯನ್ನು ಕೊಟ್ಟಿದ್ದಿತು. ನನ್ನ ಪತ್ರ ಓದಿದ ಅವನ ಮುಖ ಕ್ಕೊಮ್ಮಿಂದೊಮ್ಮೆಲೆ ಕಪ್ಪಿಟ್ಟಿತು. ನಾನು ನಗಾಡುತ್ತಲೇ ಅವನೊಡನೆ ಮಾತು ಮುಂದುವರಿಸಿದೆ. ಅವನು ಸಂಪೂರ್ಣ ಹೆದರಿ ಹೋಗಿದ್ದ. ಹೀಗೇ ಆದುದಾದರೆ ತನಗೆ ಉಳಿಗಾಲವಿಲ್ಲವೆಂದ. ಮುಂದಕ್ಕೆ ನಮ್ಮ ಸಹವಾಸ ಕಡಿಮೆ ಮಾಡಬೇಕೆಂದು ಹಲುಬಿದ. ನಾನು ಅವೊಂದಕ್ಕೂ ಕಿವಿಗೊಡದೆ ಹುರುಪುಗೊಳಿಸುತ್ತಾ ಸಡಗರದಿಂದ ನುಡಿದೆ. ಕೊನೆಗೆ ಸ್ತ್ರೀಯಾದ ನನಗೆ ಅವನಿಂದ ಹಾಳುಹೆಸರು ಬರಕೂಡದೆಂಬುದೊಂದೇ ಅವನ ವಾದ. ನನಗಾಗಿ ಚಿಂತಿಸುವ ಅಗತ್ಯವೇ ಇಲ್ಲವೆಂದು ತಿಳಿಸಿದೆ.

“ ಅಂದು ನನ್ನನ್ನು ಬೀಳ್ಕೊಟ್ಟು ಹೋದ ಶ್ರೀನಿವಾಸನ ದರ್ಶನ ಮತ್ತೆ ಒಂದು ವಾರದ ತನಕ ಅಲಭ್ಯವಾಯಿತು. ಕ್ಲಾಸಿನಲ್ಲಿ ಪಾಠದ ಸಮಯದಲ್ಲಿ ಇರುತ್ತಿದ್ದವ ಕಾಲೇಜು ಬಿಟ್ಟಾಗ ಫರಾರಿಯಾಗುತ್ತಿದ್ದ. ಆಟದ ಬಯಲಿಗೂ ಬರುತ್ತಿರಲಿಲ್ಲ. ಈ ತೆರನಾಗಿ ಫಕ್ಕನೆ ಅವನೊಂದು ರೀತಿಯ ಪರಿವರ್ತನೆ ಹೊಂದಿದ್ದ. ನಾನಾದರೋ ಅವನ ಮುಖದರ್ಶನ ಸರಿಯಾಗಿ ದೊರೆಯದೆ ಹುಚ್ಚರಂತಾದೆ. ಕಾಲೇಜು ಬಿಟ್ಟೊಡನಾದರೂ ಮಾತಾಡುವ ಎಂದರೆ ಸಿಗುತ್ತಲೇ ಇರಲಿಲ್ಲ. ಆದರೆ ಒಂದು ದಿನ ಕಾಲೇಜು ಬಿಟ್ಟೊಡನೆ ತವಕದಿಂದ ಹೊರ ಬಂದು ಅವನಿಗಾಗಿ ಕಾದು ನಿಂತೆ. ಪುಣ್ಯಾತ್ಮನಿಗೆ ಅಂದು

ನುಸುಳಿ ಹೋಗಲು ಎಡೆ ದೊರೆಯುಲಿಲ್ಲ. ಹೇಗೂ ಅವನನ್ನು ಸಂಧಿಸಿದೆ. ಅವನ ಮನದಲ್ಲಿ ಕವಿದ ಅಂಧಕಾರ ಅದೊಂದೇ. ನಾನು ಹೇಳಿದ ಸಮಾಧಾನ ಅವನಿಗೆ ಹಿಡಿಸಲಿಲ್ಲ. ಕೊನೆಗೆ, ಹೀಗೆ ನೀನು ಮಾಡಿದರೆ ನಾನು ಬಾಳುವುದೇ ಕಷ್ಟಕರ. ನಿನ್ನ ಆಗಮನವಿಲ್ಲದಿದ್ದರೆ ನನ್ನ ಮನಸ್ಸಿಗೆ ಬಹಳ ಧಕ್ಕೆಯುಂಟಾಗಿ ನೆಮ್ಮದಿಯೇ ದೊರಕುವುದಿಲ್ಲ. ಆದ್ದರಿಂದ ನೀನು ದಿನಕ್ಕೊಂದು ಬಾರಿಯಾದರೂ ಸಂಧಿಸಬೇಕು. ನಿನಗೆ ನನ್ನನ್ನು ಮಾರ್ಗದಲ್ಲಿ ಸಂಧಿಸುವುದು ಬೇಸರವಾದರೆ ನನ್ನ ರೂಮಿನತ್ತವಾದರೂ ಬರಲೇಬೇಕೆಂದು ಅವನೊಡನೆ ಅಂಗಲಾಚಿ ಬೇಡಿ ಕರೆದೊಯ್ದೆ. ಕಚ್ಚುವ ನಾಯಿಗಳಿವೆ ಎಂದು ಬೆದರಿ ನಾವು ತಿರುಗುವುದನ್ನೇ ಬಿಡುವುದೇ? ಅದರ ಸ್ವಭಾವವನ್ನು ಹೇಗಾದರೂ ತಿದ್ದಬಹುದು. ನಮ್ಮ ನಡೆಯನ್ನು ನಾವು ಸರಿಪಥಕ್ಕೆ ಹಚ್ಚಿದರೆ ಸರಿ. ಅವರ್‍ಯಾರೋ ಹುಚ್ಚರು ತಲೆಗೇರಿದ ಹುಚ್ಚಿನಿಂದ ಏನೇನೋ ಮಾತಾಡಿಕೊಳ್ಳುತ್ತಿದ್ದಾರೆ. ತಮಗೆ ಸಂತೋಷ ಎಂದು ಕಂಡ ದಾರಿ ಅವರು ಹಿಡಿಯುತ್ತಿರುವರು. ಅದಕ್ಕೆಲ್ಲ ನಾವು ಹೆದರಿದರೆ ನಮಗೇ ಅದರಿಂದ ಕುಂದು. ಬದಲಿಗೆ ಅವರಿದಿರಲ್ಲೇ ಧೀರತೆಯಿಂದ ಮುಂದೆ ಸಾಗಿದರೆ ಮತ್ತೆ ಅವರು ತಲೆ ಎತ್ತಲಂಜುತ್ತಾರೆ. ನಮ್ಮ ಮುಂದೆ ಅವರ ಬೇಳೆ ಬೇಯುವುದಿಲ್ಲ. ನಾವು ನಮ್ಮಷ್ಟಕ್ಕಿರುವುದರಿಂದ ಯಾರಿಂದೇನೂ ಮಾಡಲು ಸಾಧ್ಯವಿಲ್ಲ. ಎಂದು ಏನೇನೋ ಬುದ್ಧಿವಾದಗಳನ್ನು ದೊಡ್ಡ ಅನುಭವಿಕಳಂತೆ ಹೇಳಿ ಅವನ ಮನಸ್ಸನ್ನು ತಿರುಗಿಸಿ ಸಂತೋಷಗೊಳಿಸಿದೆ."

"ಈ ಸಮಯದಲ್ಲಿ ನಮ್ಮ ನಾಟಕದ ಗಾಳಿ ನನ್ನ ಮನೆಯವರೆಗೂ ಹರಡಿತು. ಯಾರೋ ಕುಹಕಿಗಳ ಕೆಲಸ ಅವರನ್ನು ತಲೆ ಕೆಡಿಸಿದ್ದಿರಬಹುದು. ಇಲಿ ಓಡಿತೆಂದರೆ ಹುಲಿ ಹಾರಿತೆಂದು ಬೆಚ್ಚಿ ಬೀಳುವಂತಹ ಆ ಹಿರಿಯರಿಗೆ ಇದೆಲ್ಲ ಕೇಳಿದರೆ ತಲೆ ತಿರುಗದಿರುವುದೇ? ಇಷ್ಟಕ್ಕೆಲ್ಲ ಕಾರಣ ನಮ್ಮ ಹಲವು ಮಿತ್ರರ ಮೂಢತನವೆನ್ನಬೇಕು. ಒಂದು ಸುದೀರ್ಘ ಕಾಗದವು ಮನೆಯಿಂದ ಬಂತು. ಬುದ್ಧಿ ಬೋಧನೆಯ ಸುರಿಮಳೆಯೇ ಆ ಪತ್ರವಾಗಿತ್ತು. 'ಬೆಳೆದ ಹುಡುಗಿ ನೀನು. ಹುಡುಗರೊಡನೆ ಹೆಚ್ಚಾಗಿ ತಿರುಗಬಾರದು. ಮುಂದಕ್ಕೆ ಅದರಿಂದ ನಿನಗೆ ಹಾನಿಯಿದೆ. ನಾವು ಹೇಗಿದ್ದರೂ ಆಡುವವರ ಬಾಯಿ ಕಟ್ಟಲು ಸಾಧ್ಯವಿಲ್ಲ. ಏನಾದರೂ ಹೆಚ್ಚು

ಕಡಿಮೆಯಾದರೆ ಸಮಾಜ ಬಾಹಿರರಾಗಬೇಕಾದೀತು. ಎಲ್ಲಿ ಏನು ಹೊಸ ವಾರ್ತೆ ದೊರೆಯುವುದೆಂದು ಕಿವಿಯರಳಿಸಿಯೇ ಕಾಯುತ್ತಿರುವರು ನಮ್ಮ ಸಮಾಜ ಸುಧಾರಕರು. ಆದ್ದರಿಂದ ನಿನ್ನ ಮಾನ ನೀನು ಕಾಪಾಡಿಕೊಳ್ಳ ಬೇಕು. ಹಳ್ಳಿಯಿಂದ ಪೇಟೆಗೆ ಓದಲಿಕ್ಕಾಗಿ ಹೋದವಳು ಮರ್ಯಾದೆ ಉಳಿಸಿಕೊಂಡು, ಹೋದ ಹಾಗೆ ಹಿಂದೆ ಬಂದು ನಮಗೂ ಒಂದು ಹೆಸರು ತರಬೇಕು; ಎಂದೆಲ್ಲ ಪುರಾಣ ಬರೆದಿದ್ದರು ಸರಿ. ಹಿರಿಯರು—ರಕ್ಷಕರಾದ ಅವರು ನನಗೆ ಮುಂಜಾಗ್ರತೆ ಹೇಳಬೇಕಾದುದೇ. ಅದಕ್ಕೆಲ್ಲ ಅವರನ್ನು ದೂರಿ ಪ್ರಯೋಜನವಿಲ್ಲ. ಆದರೆ ನಮ್ಮ ಗೆಳೆಯರ ಹೊಟ್ಟೆಕಿಚ್ಚು ಮಾತ್ರ ಯಾರ್‍ಯಾರ ಜೀವ ಹಿಂಡೀತು.

"ಆದರೆ ನಾನೆಂಥವಳು! ನಾನು ನನ್ನ ಚತುರೋಪಾಯಗಳನ್ನು ಉಪಯೋಗಿಸಿ ಅವರಿಗೆ ಪತ್ರ ಬರೆದೆ. ಇಲ್ಲದಿದ್ದರೆ ಶ್ರೀನಿವಾಸನಿಲ್ಲದ ಜೀವನದಲ್ಲಿ ನನ್ನ ಓದು ಒಂದೇ ಒಂದು ದಿನ ಸಾಂಗವಾಗಿ ಸಾಗುವುದು ಕಷ್ಟ. ಶ್ರೀನಿವಾಸನ ಗುಣ, ನಡತೆ, ಯೋಗ್ಯತೆಗಳನ್ನು ವಿವರಿಸಿದೆ. ಅವನು ಕಾಲೇಜಿನಲ್ಲಿ ಗಳಿಸಿದ ಸ್ಥಾನ, ನನಗೆ ಅವನ ನೆರವಿನಿಂದ ದೊರೆತ ಸ್ಥಾನ, ಅವನೂ ನಾನು ಕೂಡಿ ಕಲಿಯುವುದರಿಂದ ನನ್ನ ಓದುವಿಕೆಗೆ ಒದಗುತ್ತಿದ್ದ ಉಪಕಾರ ಮೊದಲಾದವುಗಳಿಗೆಲ್ಲ ನಾನಾ ಬಣ್ಣ ಬಳಿದೇ ತಿಳಿಸಿದೆ, ಅವ ರಿಗೂ ಇದು ಹೌದೆಂದು ತಿಳಿದಿರಬೇಕು. ಅಲ್ಲದೆ ಯಾರನ್ನೊಡನಾದರೂ ವಿಚಾರಿಸುವಾಗ, ಕಣ್ಣಾರೆ ಕಂಡವರಿಂದ ಅವನ ನಯವಿನಯ ಶೀಲತೆಗಳು ಗೊತ್ತಾದುವೋ ಏನೋ? ಅಂತೂ, ಆನಂತರ ನನಗವರ ಹಾವಳಿ ತಕ್ಕ ಮಟ್ಟಿಗೆ ತಪ್ಪಿತು. ಆದರೆ ಮುಂಜಾಗ್ರತೆ ಮಾತ್ರ ಪ್ರತಿಯೊಂದು ಪತ್ರ ದಲ್ಲೂ ಬಂದೇ ಬರುತ್ತಿತ್ತು.

"ರಜಾ ದಿನಗಳಲ್ಲಿ ನಾವು ಎಲ್ಲಿಗಾದರೂ ತಿರುಗಾಡಲು ಹೋಗುವು ದಿತ್ತು. ಸಾಯಂಕಾಲ ಸಮಯದಲ್ಲಿ ಪೇಟೆಯೇ ಜನಸ್ತೋಮದಿಂದ ತುಂಬಿ ಕೊಂಡಿರುವಾಗ ನಾವಿಬ್ಬರು ಒಟ್ಟಾಗಿ ವೈಗೆ ವೈಯಾನಿಸಿಕೊಂಡೇ, ಯಾವೊಂದು ಸಂಕೋಚವಿಲ್ಲದೆ ಹರಟೆ ಹೊಡೆಯುತ್ತಾ ಮುಂದುವರಿಯು ವುದು ಅದೆಷ್ಟೋ ಮಂದಿಯ ಕಣ್ಣಿಗೆ ಮಣ್ಣೆರಚಿದಂತಾಗುತ್ತಿತ್ತು. ಹಿಂದಿ ನಿಂದಲೇ ಅನುಸರಿಸಿ ಬಂದು, ವ್ಯಂಗವಾಗಿ ಏನೇನೋ ಚೇಷ್ಟೆ ಮಾಡಿ

ನಮ್ಮನ್ನು ಅಣಕಿಸುತ್ತಿದ್ದರು. ಆದರೆ ನಾವಿದಕ್ಕೆ ಮಣಿಯುತ್ತಿರಲಿಲ್ಲ. ಶ್ರೀನಿವಾಸನೂ ಈಗ ನಿಶ್ಚಲ ಹೃದಯಿಯಾಗಿ, ಯಾರ ಯಾವ ಹಾಸ್ಯಗಳಿಗೂ ಕಿವಿಗೊಡುತ್ತಿರಲಿಲ್ಲ. ನಮಗೆ ಈ ವಿಹಾರದಿಂದ ಅದೆಷ್ಟೋ ಉಲ್ಲಾಸ ಒದಗುತ್ತಿತ್ತು, ಎಷ್ಟೋ ಇಣುಕು ಮುಖಗಳು ನಮ್ಮನ್ನು ದೃಷ್ಟಿಸಿದರೂ ನಾವು ಬೆದರದೆ ಮುಂದುವರಿಯುವುದು ಅವರಿಗೆ ಆಶ್ಚರ್ಯವಾಗುತ್ತಿತ್ತು. ನನಗಾದ ಆನಂದ ರಜಾ ದಿನಗಳಿಗಾಗಿ ಯಾವಾಗಲೂ ಹಂಬಲಿಸುವಂತೆ ಮಾಡಿತು.

"ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ವರ್ಷವೊಂದು ಸರಿದುಹೋಗಿತ್ತು. ನನ್ನ ಮನೋರಾಜನೊಡನೆ ವಿನೋದದಲ್ಲೇ ಮಗ್ನರಾಗಿದ್ದ ನಮಗೆ, ಸಮಯ ಬೇಗ ಜಾರಿದ್ದು ಗೊತ್ತೇ ಆಗಲಿಲ್ಲ. ಮರುವರ್ಷದ 'ಕಾಲೇಜು ಡೇ'ಯು ಸಮೀಪಿಸಿತು. ಈ ಬಾರಿಯ ನಾಟಕದಲ್ಲಿ ನಾವು ಪಾತ್ರಧಾರಿಗಳಾಗುವುದಿಲ್ಲವೆಂದು ತಿಳಿಸಿದೆವು. ಪ್ರಿನ್ಸಿಪಾಲರ ಮನಸ್ಸು ಬಹಳ ಕುಗ್ಗಿಹೋದರೂ ಮುಂಬರಲಿರುವ ಪರೀಕ್ಷೆಯ ವಿಷಯ ತಿಳಿಸಿದಾಗ ಅವರಿಗೆ ಮನದಟ್ಟಾಯಿತು. ಮತ್ತಾವ ಒತ್ತಾಯವೂ ಇಲ್ಲದೆ ಸುಮ್ಮನಾದರು. ಕಳೆದ ವರ್ಷ ಅಪಾರ ಯಶಸ್ಸು ಗಳಿಸಿದ ನಮಗೆ ಈ ವರ್ಷ ಭಾಗ ವಹಿಸದಿರಲೂ ಮನಸ್ಸಿರಲಿಲ್ಲ. ತಮ್ಮನ್ನು ಆವರಿಸಿದ ಕಲೆಯ ಆ ಹುರುಪು ನಮ್ಮನ್ನು ಸುಮ್ಮನಿರಗೊಡಲಿಲ್ಲ. ಮನಸ್ಸಿನ ವೇಗ ಮತ್ತೂ ಕಲೆಯೆಡೆಗೆ ಹರಿಯಿತು. ಕಳೆದ ವರ್ಷದ ಯಶಸ್ಸು—ಈ ಪರ್ಷ ಸುಮ್ಮನಿರುವುದು ಸರಿಯಲ್ಲವೆಂದು ಪ್ರಚೋದಿಸಿತು. ಕೊನೆಗೆ ನಾಟ್ಯ ಒಂದರಿಂದ ನಮ್ಮ ಸೇವೆಯನ್ನು ಸಲ್ಲಿಸಿ ಬಿಡುವುದೆಂದು ನಿರ್ಧಾರಗೈದೆವು. ಪ್ರಿನ್ಸಿಪಾಲರಿಗೆ ನಮ್ಮ ಕಲಾಸೇವಾಸಕ್ತತೆ ಕಂಡು ಅಪರಿಮಿತ ಆನಂದವಾಯಿತು. ನಮ್ಮನ್ನು ಕರೆಯಿಸಿ, ನಮ್ಮ ಸ್ಫೂರ್ತಿಯನ್ನು ಹೊಗಳಿ ವ್ಯಕ್ತಪಡಿಸುತ್ತಾ "ನೀವಿಬ್ಬರೂ ಸಹೋದರ-ಸಹೋದರಿಯರಾಗಿ ಹುಟ್ಟಬೇಕಿತ್ತು. ಆದರೆ ವಿಧಿ ನಿಮ್ಮಿಬ್ಬರಿಗೂ ಅಂತರದಲ್ಲಿ ಜನ್ಮವಿತ್ತಿತು. ಇದೆಲ್ಲ ದೈವಲೀಲೆಯೇ ಆಗಿರಬೇಕು." ಎಂದು ನಗುಮುಖದಿಂದ ಹರಸುತ್ತಾ "ಮುಂದಕ್ಕೂ ಹೀಗೆಯೇ ಕಲಾಸೇವಾಸಕ್ತರಾಗಿ ಲೋಕವಿಖ್ಯಾತರಾಗಿರಿ" ಎಂದು ಹರ್ಷೋದ್ಗಾರದಿಂದ ನಮ್ಮನ್ನು ಕಳುಹಿಸಿಕೊಟ್ಟರು. ನಮ್ಮ ಮೇಲೆ ಪ್ರಿನ್ಸಿಪಾಲರಿಗಿದ್ದ ಅಪಾರ

ದಯೆ ನಮಗೆ ಇನ್ನಷ್ಟು ಪ್ರೋತ್ಸಾಹವಿತ್ತಿತು. ನಮ್ಮ ಜನನವೂ ಪ್ರಿಸ್ಸಿ ಪಾಲರಂದಂತೆ ಆಗಿದ್ದರೆ............ ಆದರೆ ಹಿತ್ತಲಗಿಡ ಮದ್ದಲ್ಲವಷ್ಟೇ! ಒಂದೇ ಮನೆಯವರಾಗಿದ್ದರೆ ನಮ್ಮಲ್ಲಿ ಅಷ್ಟೊಂದು ಅನ್ಯೋನ್ಯತೆ ಇದ್ದಿರ ಬಹುದೇ?

"ಅಂದು ಸಾಯಂಕಾಲ ಕಾಲೇಜಿನಿಂದ ಹಿಂತಿರುಗುತ್ತಿದ್ದಂತೆ ನೃತ್ಯದ ಪ್ರಸ್ತಾಪವೆತ್ತಿದೆ. ಸರಿ. ನೀನೇ ಒಂದು ಕತೆ ಹೆಣೆದು ನಾಟ್ಯದ ಪ್ರಸ್ತಾಪ ಹಾಕಿಬಿಡು ಎಂದ. ನನಗೆಲ್ಲಿಲ್ಲದ ನಗು ಬಂದಿತು. ಏಕೆಂದರೆ ಆ ಮಾತು ಅವನಾಡಿದ್ದೇ ಹಾಸ್ಯಕ್ಕಾಗಿ. ಇಲ್ಲದಿದ್ದರೆ ನಾಟ್ಯದ ಪ್ರಸ್ತಾರ ಹಾಕುವುದು ನನ್ನಿಂದ ದುಸ್ಸಾಧ್ಯವೆಂದು ಅವನಿಗೆ ತಿಳಿದೇ ಇತ್ತು. ಅವನ ತಲೆಯಲ್ಲಿ ಮೂಡಿದ ಮೊಳಕೆಗೆ ನೀರೆರೆಯುವಂತೆ ಅವನು ಸೂಚಿಸಿದಂತೆ ಕುಣಿಯುವುದು ಮಾತ್ರ ನನಗೆ ತಿಳಿದಿರುವುದು. 'ನಾನು ಬರೆದ ಕತೆಯಲ್ಲಿ ನಿನ್ನ ಹೆಜ್ಜೆ ನಲಿದೀತೆ?' ಎಂದು ಅವನೊಡನೆ ಕೇಳಿದೆ. 'ಹಾಗಾದರೆ ನೀನು ಮನುಷ್ಯಳಲ್ಲವೆ?' ಎಂದು ಹಾಸ್ಯದ ಸರಸವಾಡುತ್ತಲೇ ಮುಂದಾದೆವು. ನಂತರ ನಾಟ್ಯದ ಕಥಾರಚನೆಯ ವಿಷಯ ಚರ್ಚಿಸಿದೆವು.

ಮರುದಿನ ಬೆಳಿಗ್ಗೆ ಶ್ರೀನಿವಾಸ ರೂಮಿಗೆ ಬಂದ. ಎಂದೂ ಬೆಳಿಗ್ಗೆ ಬಾರದ ಅವನಾಗಮನ ನನಗೆ ಆಶ್ಚರ್ಯವನ್ನುಂಟು ಮಾಡಿತು. ಬಂದವನೇ ಕಿಸೆಯಿಂದ ಒಂದು ಬರೆದ ಕಾಗದವನ್ನು ತೆಗೆದು ನನ್ನ ಕೈಗಿತ್ತ. 'ಬೆಳದಿಂಗಳ ವಿಹಾರ' ಎಂಬ ತಲೆಬರಹವನ್ನು ಚಿತ್ರಿಸಿದ್ದ. 'ಯಾರ ವಿಹಾರ' ಎಂದು ಚೇಷ್ಟೆಯಾಡುತ್ತಲೇ ಕೈಗೆ ತೆಗೆದುಕೊಂಡು ಓದಿ ಮುಗಿಸಿದೆ. ಮುಗ್ಧಗೊಳಿಸುವ ವಿಷಯವನ್ನೇ ಎತ್ತಿಕೊಂಡಿದ್ದ. ಓದುವಾಗ, ಅವನ ಮಿದುಳೇನಾದರೂ ಪ್ರೇಮದ ತೊರೆಯಲ್ಲೇ ತೇಲಿಕೊಂಡಿದೆಯೇ ಎಂದು ಭಾಸವಾಗುತ್ತಿತ್ತು. ಆ ಕಥೆಯು ಈ ರೀತಿಯಾಗಿದ್ದಿತು........

"ನಾಯಕ ನಾಯಕಿಯರಿಬ್ಬರು ತಂಬೆಳಕಿನಲ್ಲಿ ವಿಹಾರಕ್ಕೆ ಹೊರಟಿದ್ದಾರೆ. ಅದರಲ್ಲೂ ಪ್ರಣಯಿಗಳಾದ ಅವರಿಗೆ ಹುಣ್ಣಿಮೆಯ ಬೆಳದಿಂಗಳ ರಾತ್ರಿಯೆಂದರೆ ಮತ್ತೆ ಹೇಳಬೇಕೆ? ಚಂದ್ರನ ತಂಪಾದ ಶುಭ್ರ ಪ್ರಭೆಗೆ ಅವರ ವಿಹಾರ ಇನ್ನಷ್ಟು ಹುರುಪುಗೊಂಡಿತ್ತು. ರಾತ್ರಿಯಲ್ಲಿ....ಮಳೆಯಿಂದ ಹೊರಬರಲು ಹಿರಿಯರ ಅಡ್ಡಿಯಿರುವ ಸಮಯದಲ್ಲಿ ಇಷ್ಟು ತಂಪು ಇರು

ವಾಗ ಹಗಲಲ್ಲೂ ಇಂತಹ ಶಾಂತತೆಯು ಇರುತ್ತಿದ್ದರೆ ಎಷ್ಟು ಚೆನ್ನಾಗಿ ರುತ್ತಿತ್ತೋ ಎಂಬಾಲೋಚನೆಯಲ್ಲಿ ಸವಿಕನಸು ಕಾಣುತ್ತಾ, ಸರಸಸಲ್ಲಾಪ ಗೈಯುತ್ತಾ ಪಕ್ಕದಲ್ಲಿದ್ದ ಉದ್ಯಾನದ ನವಶೃಂಗಾರದಿಂದ ಕೂಡಿದ ಲತಾ ಮಂಟಪದಲ್ಲಿ ಕುಳಿತು ಸಂಸಾರ ಪ್ರೇಮ ಸರಸಸಲ್ಲಾಪಗೈಯಲು ಮುಂದ್ಹೋ ಗುತ್ತಾರೆ. ಕೊಳದ ನೈದಿಲೆಗಳ ತಂಪೂ, ಪರಿಪರಿಯ ಪುಷ್ಪಗಳರಳುತ್ತಿರುವ ಕುಸುಮ ಸುಗಂಧವೂ ತಂಗಾಳಿಯಲ್ಲಿ ಮಿಳಿತವಾಗಿ ಹರಿಯುತ್ತಿದ್ದು ಪ್ರೇಮಿ ಗಳಿಗೆ ಸುಖಸ್ಪರ್ಶವನ್ನೊದಗಿಸುವಂತೆ ಸುವಾಸನೆಯನ್ನು ಬೀರುತ್ತಿತ್ತು. ದೂರದಲ್ಲಿ ಅರಳಿ ಸುಗಂಧ ಬೀರುತ್ತಿದ್ದ ಮಲ್ಲಿಗೆಯ ಪೊದೆಯೊಂದು ಬೆಳ ದಿಂಗಳ ನೋಟಕ್ಕೆ ಹಸನಾದ ಶಯ್ಯೆಯಂತೆ ಕಂಗೊಳಿಸುವುದನ್ನು ತನ್ನ ಪ್ರಿಯೆಗೆ ಕೈನೀಡಿ ತೋರಿಸುತ್ತಾ ಮುಂದರಿಯುವರು. ಎರಡ್ಹೆಜ್ಜೆ ಮುಂದ ರಿದಾಗ ಪಕ್ಕದಲ್ಲಿ ಹರಿಬಿರಿದ ಪಾರಿಜಾತದ ಮರದ ಚಿಕ್ಕ ಗೆಲ್ಲೊಂದನ್ನು ಪ್ರೇಯಸಿ ಕೊಯ್ದು ಎಷ್ಟು ಹಸನಾಗಿ ಅರಳಿ ನಗುತ್ತಿದೆ ಎಂದು ಪ್ರಿಯತಮ ನೊಡನೆ ಕೇಳುವಳು. ಅಲ್ಲಿಂದಡಿಯಿಡಲಾಗಿ, ಎತ್ತರವಾಗಿ ಬೆಳೆದ ಸಂಪಗೆ ವೃಕ್ಷದಲ್ಲಿನ ಪುಷ್ಪಗಳು ವೃಂದಾವನ ಸುತ್ತಲೂ ಅಂದದಿಂದ ಬೆಳಗುತ್ತಿರುವ ಇಲೆಕ್ಟ್ರಿಕ್ ಬೆಳಕಿಗೆ ಗಗನದಲ್ಲಿ ಮಿನುಗುತ್ತಿರುವ ನಕ್ಷತ್ರಗಳಂತೆ ಮಿನುಗು ತ್ತಿದ್ದುವು. ಪ್ರಿಯನ ಗಲ್ಲವನ್ನೊತ್ತಿದ ಪ್ರಿಯತಮೆಯು ತನ್ನ ಪ್ರೀತಿಯ ಆ ಸಂಪಗೆಯೊಂದನ್ನು ತಂದು ತನ್ನ ಸಿರಿಮುಡಿಯಲ್ಲಿರಿಸಿದರೆ, ತಾನೆಷ್ಟು ಆನಂದ ಭರಿತಳಾಗುತ್ತಿದ್ದೆ ಎಂಬುದಾಗಿ ಲಲ್ಲೆಯಾಡುವಳು. ಪ್ರಣಯಚೇಷ್ಟೆಯಿಂದ ಕೆರಳಿದ ಪ್ರಣಯಿ, ಎನ್ನರಸಿಗಲ್ಲದ ಹೂವು ಹೂವೇ ಎಂದೆನ್ನುತ್ತಾ ಆ ಮರ ದತ್ತ ನಡೆಯುವನು. ಕೈಗೆಟಕದ ಆ ಹೂವಿಗಾಗಿ ಹಾರುವನು. ಎಟಕ ದಿರಲು ಪುನಃ ಪುನಃ ಪ್ರಯತ್ನಿಸುವನು. ಆಗ ಪಕ್ಕದ ರೆಂಬೆಯೊಂದರಲ್ಲಿ ಏನೋ ಒಂದು ವಿಕಾರ ರೂಪವೊಂದು ಅವನಿಗೆ ಕಾಣಿಸಿದಂತಾಯಿತು. ಬೆಳದಿಂಗಳ ಛಾಯೆಗೆ ಭ್ರಮಿಸಿದ ನಾಯಕ, "ಅಯ್ಯೋ ಭೂತ!" ಎಂದು ಒದರುತ್ತಾ ಮೂರ್ಛೆ ಬಂದು ಕುಸಿದು ಬೀಳುವನು. ಗಾಬರಿ ಗೊಂಡ ನಾಯಕಿ ಬೆಕ್ಕಿನ ಹೆಜ್ಜೆಯಿಂದ ಧಾವಿಸುವಳು. ಇವಳ ಬರವನ್ನು ಕಂಡು, ರೆಂಬೆಯ ಮರೆಯಲ್ಲಿದ್ದ ಗೂಗೆಯೊಂದು 'ಭುರ್ರೆಂ' ದು ಶಬ್ದ ಮಾಡುತ್ತಾ ಹಾರಿಹೋಗುವುದು. ಶಬ್ದ ಕೇಳಿಯೂ ಪ್ರೇಮಿಯ ಮೂರ್ಛೆ

ಯಿಂದಲೂ ನಾಯಕಿ ಮತ್ತಷ್ಟೂ ಹೆದರಿಕೊಂಡರೂ ಗೂಗೆ ಹಾರಿದ್ದನ್ನು ಕಂಡು ಧೈರ್ಯಗೊಂಡು ಪ್ರಿಯನ ಶೈತೋಪಚಾರದಲ್ಲಿ ಮಗ್ನಳಾಗುವಳು. ತಡವರಿಸಿ ಎಚ್ಚರಗೊಂಡ ನಾಯಕ ಪ್ರೇಯಸಿಯ ಮೃದು ಸ್ಪರ್ಶಕ್ಕೆ ಮೈ ಮರೆಯುತ್ತಿದ್ದರೂ ಮತ್ತೊಮ್ಮೆ ಅದೇ ಮರದತ್ತ ಕಣ್ಣಾರಳಿಸಿ, ಬೆದರಿ.... " ಭೂತ ! " ಎಂದು ಒದರುವನು. ನಾಯಕಿ ಸಂತೈಸುತ್ತಾ " ಭೂತ ವೆಲ್ಲಿದೆ ? ಅಲ್ಲೊಂದು ಗೂಗೆ ಕುಳಿತಿತ್ತು. ಅದೀಗ ಹಾರಿ ಹೋದುದನ್ನು ಕಣ್ಣಾರೆ ಕಂಡೆ " ಎನ್ನುವಳು. ಪ್ರಿಯೆಯ ಬಾಯಿಯಿಂದ ಉದುರಿದ ಮುತ್ತಿನಂತಹ ನುಡಿಗಳವನಿಗೆ ನವಚೈತನ್ಯವನ್ನೊದಗಿಸಿತು. ತನ್ನ ಹುಂಬ ತನಕ್ಕಾಗಿ ಮುಮ್ಮಲ ಮರುಗುವನು. ಅಲ್ಲಿಗೆ ಅಂದಿನ ವಿಹಾರದಿಂದ ಹಿಂತೆರಳುವನು.

" ಕಥೆ ಹೇಗೆ ಬರೆದಿದ್ದರೂ ಅದರ ರುಚಿಗಿಂತ ಮಿಗಿಲಾದುದು ಅದರ ಅಭಿನಯ. ನೃತ್ಯಾಭಿನಯಕ್ಕೆ ಎಂತಹವನ ಮನಸ್ಸನ್ನೂ ಕರಗಿಸಿ ಬಿಡಬೇಕೆಂದು ನನ್ನ ಮತ. ನಾಲ್ಕೈದು ದಿನಗಳ ಮುಂಚೆಯೇ ನಾವು ಅಭ್ಯಾಸಕ್ಕೆ ಮೊದಲು ಮಾಡಿದೆವು. ಸಮಯ ಸಂಕೋಚದಿಂದ, ಪರೀಕ್ಷೆಯ ಗಲಾಟೆ ಯಿಂದ ಅಷ್ಟೊಂದು ತಿದ್ದಿ ನೃತ್ಯ ಅಭ್ಯಾಸಿಸಲು ಸಮಯವಿರಲಿಲ್ಲ. ಆದರೂ ಒಂದೆರಡು ದಿನದ ಅಭಿನಯದಲ್ಲಿಯೇ ನಾವು ಗೆದ್ದುಬಿಟ್ಟೆವು.

" ಕಾಲೇಜು ಡೇ ' ದಿವಸ ನಮ್ಮ ನೃತ್ಯಾಭಿನಯದ ಕುಶಲತೆಯಿಂದ ಎಲ್ಲರೂ ತಲೆದೂಗಿದರು. ಎಡೆಬಿಡದೆ ಕರತಾಡನಗಳು ಮೊಳಗುತ್ತಿದ್ದುವು. ಎಷ್ಟೋ ಪ್ರೇಕ್ಷಕರು ' ಒನ್ಸ್ ಮೋರ್ ' ಎಂದು ಕೂಗಿಕೊಂಡರು. ಪ್ರೇಕ್ಷ ಕರ ಮನ ತಣಿಸಲು ಆನಂದದಿಂದ ಕುಣಿದೆವು. ಪ್ರತಿಯೋರ್ವನ ಹೊಗ ಳುವಿಕೆಯೂ ನಮ್ಮ ಕಿವಿ ಕಿವುಡು ಮಾಡಿತು. ಅಂತೂ ಆ ವರ್ಷದ ವರದಿ ಯಲ್ಲಿಯೂ ನಮಗೆ ವಿಜಯ ದೊರೆಯಿತು. ಕಾಲೇಜು ರತ್ನಳಾಗಿ ಮೆರೆ ದೆವು. ಊರವರ ಪುರಸ್ಕಾರಕ್ಕೆ ನಾವು ಹೆಮ್ಮೆ ಪಡಬೇಕಾಯಿತು. ನಮ್ಮ ಪ್ರಿನ್ಸಿಪಾಲರಿಗಂತೂ ಇತರರ ಹೊಗಳು ಮಾತುಗಳು ನಮ್ಮ ಕಲಾಕುಶಲತೆ ಗಾಗಿ ಇನ್ನೂ ನಮ್ಮನ್ನು ಆದರಿಸುವಂತೆ ಹೆಚ್ಚು ಮಾಡಿತು.

" ನಮ್ಮ ಈ ಸಲದ ಮೇಲ್ಮೆಯನ್ನು ಕಂಡ ಹಲವಾರು ಸಹಪಾಠಿಗಳ ಕಿಚ್ಚಿಗೆ ತುಪ್ಪವೆರೆದಂತಾಯಿತು. ಅಲ್ಲದೆ ನಮ್ಮ ಗೆಳೆತನದ ಸಹವಾಸವೂ

ಕೆಲ ಯುವಕರ ಮತ್ಸರವನ್ನು ಉಮ್ಮಳಿಸಿತು. ಯಾವ ವಿದ್ಯಾರ್ಥಿ ವಿದ್ಯಾರ್ಥಿನಿಯೊಡನೆ ಸಖ್ಯ ಬೆಳಸಲು ಮುಂದಾಗಿ, ಅವಮಾನಗೊಂಡು ಹಿಂತೆರಳಿದ್ದನೋ ಅಂತಹವರಿಗೆ ನಮ್ಮಿ ವರ್ತನೆ ಕಂಡು ಹಟ ಮತ್ತಷ್ಟು ಜಾಸ್ತಿಯಾಯಿತು. ಹಾದಿ ಬೀದಿಗಳಲ್ಲಿ ಸಿಕ್ಕಸಿಕ್ಕಲ್ಲಿ ಕಾಡತೊಡಗಿದರು. ನನ್ನ ವಿಳಾಸಕ್ಕೆ ಒಂದೆರಡು, ನಮ್ಮಿಬ್ಬರ ವ್ಯಂಗ ಚಿತ್ರಗಳೊಂದಿಗೆ ಪತ್ರಗಳೂ ಬಂದುವು. ಶ್ರೀನಿವಾಸ ಸಂಪೂರ್ಣ ಬದಲಾಗಿದ್ದ. ಹಲವರ ಕೆಣಕಿಗೆ ಹುಲಿಯಂತೆ ವರ್ತಿಸಬೇಕೆಂದು ಮತ್ತೆ ಸುಡಿಯತೊಡಗಿದ. ನಮ್ಮಲ್ಲಿ ದ್ವೇಷ ತಂದೊಡ್ಡಿ ಬೇರ್ಪಡಿಸಲು ಎಷ್ಟೋ ನಾಟಕಗಳನ್ನು ಹೂಡಿದರು. ಆಡ್ಡ ಹೆಸರಿಟ್ಟು ಏನೇನೋ ಕೂಗಿಕೊಂಡರು. ಒಲುವಿನ ಹೃದಯಿಗಳಿಗೆ ಮಾತ್ರ ಅವರ ಚಂಡಮಾರುತ ಸೋಂಕಲಿಲ್ಲ.

" ನಮ್ಮ ಪಬ್ಲಿಕ್ ಪರೀಕ್ಷೆಯು ಹತ್ತಿರ ಬಂದಂತೆ, ಆಟ, ವಿನೋದ, ಚಟುವಟಿಕೆಗಳಲ್ಲಿ ನಿರತವಾಗಿದ್ದ ನಮ್ಮ ಮನಸ್ಸು ಪಾಠದಲ್ಲೇ ತಲ್ಲೀನಗೊಂಡಿತು. ಶ್ರೀನಿವಾಸನನ್ನು ನನ್ನ ಕೋಣೆಯಲ್ಲೇ ಇರುವಂತೆ ಪ್ರೇರೇಪಿಸಿ, ಇಬ್ಬರೂ ಕೂಡಿ ಪಾಠಗಳನ್ನು ಚರ್ಚಿಸಿ, ಮನನ ಮಾಡಿಕೊಂಡು ನಮ್ಮ ಓದುವಿಕೆಯನ್ನು ಸಾಂಗಗೊಳಿಸಬೇಕೆಂದು ನಿರ್ಧರಿಸಿದೆವು. ಆ ವರ್ಷದ ಪರೀಕ್ಷೆಯಲ್ಲಿ ಇಡೀ ಪ್ರೆಸಿಡೆನ್ಸಿಯಲ್ಲೇ ಪ್ರಥಮರಾಗಿ ಪರಿಗಣಿಸಲ್ಪಡಬೇಕೆಂದು ಹೃತ್ಪೂರ್ವಕ ಭಾವನೆಯಿಂದ ಒಂದಾಗಿ ಏಕಮನಸ್ಸಿನಿಂದ ಕಲಿಯತೊಡಗಿದೆವು.

" ಎಷ್ಟೇ ಕಠಿಣ ಮನಸ್ಸಿನಾದರೂ ಹೆಣ್ಣಿನ ಕಣ್ಣೆದುರು ಕರಗುವದು ಸುಳ್ಳಲ್ಲ. ಶ್ರೀನಿವಾಸನ ಮೊದಲ ದರ್ಶನದ ದಿನಕ್ಕೆ ನಾವು ಒಂದೇ ರೂಮಿನಲ್ಲಿ ಓದಲುತೊಡಗಿದ ದಿನವನ್ನು ಹೋಲಿಸಿದರೆ, ಅಜಗಜಾಂತರವೇ ಸರಿ. ಅಂತೂ ನನ್ನ ಪ್ರೇರಣೆಯಿಂದಲೋ ಶ್ರೀನಿವಾಸನಲ್ಲಿ ಮೂಡಿದ ಪ್ರೇಮದಿಂದಲೋ ನಾವು ಒಟ್ಟಿಗೆ ಇರುವಂತಾಯಿತು.

" ಪರೀಕ್ಷೆ ಸಮೀಪಿಸುತ್ತಿದ್ದರೂ ನಮ್ಮ ವಿಹಾರಕ್ಕೆ ಅಡ್ಡಿ ಬರಲಿಲ್ಲ. ಹಗಲೆಲ್ಲ ಓದಿಕೊಂಡಿದ್ದು ಸಂಜೆ ಒಂದು ಗಂಟೆಯ ಕಾಲ ಎಲ್ಲಾದರೂ ತಿರುಗಾಡುತ್ತಿದ್ದೆವು. ಎಡೆಬಿಡದೆ ಪಾಠಗಳ ವಿಷಯವಾಗಿಯೇ ಚರ್ಚೆಮಾಡಿಕೊಳ್ಳುತ್ತಿದ್ದೆವು. ಹೀಗೇ ಒಂದು ಭಾನುವಾರ ದಿನವಿಡೀ ಓದಿ ಮಧ್ಯಾಹ್ನ

ಎರಡು ಗಂಟೆಯ ಸಮಯಕ್ಕೆ ಬೇಸರ ಬರಲು ಎಲ್ಲಾದರೂ ಹೊರಗೆ ಹೋಗಿ ಓದುವಾ ಎಂದು ಹೊರಟೆವು. 'ಬಕ್ರೆರಿ' ಕಡೆಗೆ ಹೋಗೋಣ ವೆಂದ. ದಡದಲ್ಲೂ ಹಳೇ ಕೋಟೆಯಲ್ಲೂ ಬಿಸಿಲು ಕಾವು ಬುಸುಗುಟ್ಟು ತ್ತಿತ್ತು. ಅಲ್ಲಿಲ್ಲಿಯೂ ನಮಗೆ ಓದಲು ಜಾಗವಿರಲಿಲ್ಲ. ಸಮುದ್ರದ ದಡ ದಲ್ಲಿ ಬೆಳೆದು ನಿಂತು ತಂಪನ್ನ ಗಾಳಿಯನ್ನು ಬೀಸುವ 'ಗಾಳಿ' ಮರದ ತೋಟ ನಮ್ಮನ್ನು ಆ ಕಡೆ ಕರೆಯಿತು. ಅಲ್ಲಿಯ ನೆರಳಲ್ಲೇ ಕುಳಿತು ಓದುವ ಎಂದು ಒಂದು ದೋಣಿ ಗೊತ್ತು ಮಾಡಿ ಆ ದಂಡೆ ತಲುಪಿದೆವು. ಅಲ್ಲಿಯ ಆ ತಂಗಾಳಿ, ಬಿಸಿಲ ಕಾವನ್ನು ಹತ್ತಿಕ್ಕಿ ಸುಖಸ್ಪರ್ಶ ಒದಗಿಸುತ್ತಿತ್ತು. ಅಲ್ಲಿಂದ ಮುಂದೆ ಮರಮಟ್ಟಿಗಳ ಬನ ಹೊಕ್ಕೆವು. ಮರಳ ರಾಶಿಯ ಮೇಲೆ ಕುಳಿತು ನಾವಾವ ಧ್ಯೇಯದಿಂದ ಬಂದೆವೋ ಅದಕ್ಕಾಗಿ ಪುಸ್ತಕ ಬಿಡಿಸಿದೆವು. ಆದರೆ ತಂಪುಗಾಳಿಯ ಇಂಪಿಗೆ ಪುಸ್ತಕದ ಹಾಳೆಗಳು ಹಾರಿದಂತೆ, ನಮ್ಮ ಮನಸ್ಸಿನ ಹಾಳೆಯಲ್ಲಿಯೂ ಹೊಯ್ದಾಟ ಸುರುವಾಯಿತು. ಮರಗಳೂ ಇಂಪಾದ ಮಧುರ ಗಾಯನದಂತೆ 'ಸೊಂಯ್' ಎಂದು ಶಬ್ದಗೈಯುತ್ತಿ ದ್ದುವು. ಈ ಎಲ್ಲ ಹೊಸ ಅನುಭವ ನೋಟಗಳಿಂದ ನಮ್ಮ ಆನಂದ ತೊರೆ ಯಿಕ್ಕಿತು. ಪುಸ್ತಕ ಮಡಿಚಿಟ್ಟು ಮರಳ ರಾಶಿಯಲ್ಲಿ ಹೊರಳಾಡಿದೆವು. ಸಮುದ್ರದ ದಂಡೆಯಲ್ಲಿ ಮಾನವನಾವನ ಸುಳಿವೂ ಇಲ್ಲದುದರಿಂದ ಇದ್ದ ಮರ ಮಟ್ಟು ಮತ್ತು ಕಿಲಕಿಲ ನಾದಗೈಯುತ್ತಿದ್ದ ಕೆಲ ಪಕ್ಷಿಗಳೇ ಆಗ ನಮ್ಮ ಬಂಧು ಬಾಂಧವರು. ಸೃಷ್ಟಿ ಸೊಬಗಿಗೆ ಮಾರು ಹೋಗಿ ನಮ್ಮ ಪರೀಕ್ಷೆಯ ನೆನಹು ಮರೆಯುವಂತಾಯಿತು. ಸಮಯದ ಅರಿವು ಕೂಡ ನಮಗಾಗಲಿಲ್ಲ. ಸಂಜೆ ಸಮುದ್ರದ ತಪ್ಪಲಿಗಿಳಿದೆವು. ತೆರೆಗಳ ಹಾರಾಟ, ಗಾಳಿಯ ರಭ ಸಕ್ಕೆ ಹಾರಿ ಬರುವ ತುಂತುರು ಹನಿಗಳು ಪಶ್ಚಿಮಾಂಬುಧಿಯಲ್ಲಿ ಕಾಂತಿ ಹೀನ ನೇಸರ ಕಿರಣಗಳು ಮುಗಿಲ ಮುಸುಕಿನಲ್ಲಿ ಕೆಂಪಾಗಿ ಹೊಳೆಯುತ್ತಿ ರುವ ಬಾಂದಳ, ಸಂಜೆಯ ಪ್ರಶಾಂತ ವಾತಾವರಣ ನಮ್ಮನ್ನು ಮುಗ್ಧಗೊಳಿ ಸಿತು. ಕೈಕೈ ಹಿಡಿದು ತೆರೆಗಳೆಡೆ ನಡೆದೆವು. ಕಾಲಡಿಯ ಮರಳು ನೀರ ಒತ್ತಡಕ್ಕೆ ಸವೆದು ಹೋಗುವಾಗ ನನಗೇನೋ ಒಂದು ವಿಧದ ಬೆದರಿಕೆಯೇ ಆಗುತ್ತಿತ್ತು. ಕರಾವಳಿಯ ದೂರದಲ್ಲಿ ಬೆಸ್ತರ ಕೆಲ ಹುಡುಗರು ನೀರಿನೊಂ ದಿಗೆ ಸರಸವಾಡಿ ಅಡಿಯಲ್ಲಿ ಬೀಳುತ್ತಿದ್ದ ಚಿಪ್ಪುಗಳನ್ನು ಹೆಕ್ಕುತ್ತಿದ್ದರು.

ಸಮುದ್ರದ ಮಧ್ಯದಲ್ಲಿ ಶ್ವೇತವಾಹಿಗಳನ್ನು ಬಿಡಿಸಿಕೊಂಡು, ಅಲ್ಲೊಂದು ಇಲ್ಲೊಂದು ಪತ್ತೆಮಾರುಗಳು ಸಂಚರಿಸುತ್ತಿದ್ದುವು. ಸಮುದ್ರ ರಾಜನು ಇಳಿದನಿಯಲ್ಲಿ ಗುಸುಗುಟ್ಟುತ್ತ ಲೀವಿಯ ಚಲನೆಯಲ್ಲಿ ತಲ್ಲೀನನಾಗಿದ್ದನು. ನಮಗೆ ಸಮಯು ಸಂದುದರ ಅರಿವಾಗಲೇ ಇಲ್ಲ. ದಿನಮಣಿಯು ತನ್ನೆಲ್ಲ ಕಾರ್ಯಗಳನ್ನೂ ನಿರ್ವಹಿಸಿ, ಗೃಹ ಪ್ರವೇಶಿಸಲು, ಸಮುದ್ರರಾಜನ ಗೆಳೆತನ ಬೆಳೆಸಲು ಮುಂದಾಗಿದ್ದ. ಇನ್ನು ಕತ್ತಲೆಯ ತಂಪು ನಮ್ಮನ್ನು ರೂಮಿನತ್ತ ಹೊರಡಿಸಲು ಅನುವಾಯಿತು. ನಮ್ಮ ಸ್ಮರಣೆ ನಮಗೆ ಬಂದಿತು. ನಾವೆಲ್ಲಿದ್ದೇವೆ? ನಾವ್ಯಾಕೆ ಬಂದಿದ್ದೇವೆ? ಎಂಬರಿವಾಯಿತು. ನಮ್ಮ ಪುಸ್ತಕ ಮಳಲ ದಿನ್ನೆಯ ಮೇಲೆ ತಬ್ಬಲಿಯಂತೆ ಬಿದ್ದುಕೊಂಡಿದ್ದವು. ನಾವು ಬಂದುದು ಪಾಠ ಓದಿ ಪುನರಾವರ್ತನಗೊಳಿಸಿಕೊಳ್ಳಲು. ಆದರೆ........ನಡೆದುದು? ಅರ್ಧ ದಿನ ನಿಷ್ಪ್ರಯೋಜನವಾಯಿತಷ್ಟೆ! ಪರೀಕ್ಷೆಗೆ ಇನ್ನು ಒಂದು ವಾರದ ಬಿಡುವಿರುವಾಗ, ನಾವೀ ರೀತಿ ವರ್ತಿಸಿದರೆ ನಮ್ಮ ಗತಿ........ ಸಮಯದ ಗೋಚರವಿಲ್ಲದೆ ಸೃಷ್ಟಿಯುಡಿಯಲ್ಲಿ ಬಿದ್ದು ಸುಖಪಡೆದ ನಮಗೆ ಪರೀಕ್ಷೆಯು ಕಾರ್ಮುಗಿಲ ದರ್ಶನವಿತ್ತಿತು. ಇನ್ನು ನಾವು ಇಂದಿನಂತೆ ಸರಸ ಚೆಲ್ಲಾಟದಲ್ಲಿ ವೃಥಾ ಸಮಯ ಸರಿಸಬಾರದೆಂದು ನಿಶ್ಚಯಿಸಿ ಪುಸ್ತಕ ಹೇರಿಕೊಂಡು ಹಿಂತೆರಳಿದೆವು. ಅಂದಿಗೆ ನಮಗೆ ವಿಹಾರದ ಓದಿನ ಸುಖ ಸಾಕಾಯಿತು. ನಂತರ ಪರೀಕ್ಷೆ ಕಳೆಯುವ ತನಕ ವಿಹಾರಕ್ಕೆ ಮುಳ್ಳುಬೇಲಿ ಹಾಕಿದೆವು. ಇದು ನಾವು 'ರಿವಿಜನ್' ಮಾಡಲು ಹೋದಾಗ ಅನುಭವಿಸಿದ ಸ್ವಾರಸ್ಯ ಅನುಭವ.

"ಓದು ಸಾಗುತ್ತಾ ಬೇಸರ ಬಂದಾಗ ಸರಸವಾಡುತ್ತಿದ್ದೆವು. ಮೋದದಿಂದ ಅಪ್ಪಿಕೊಂಡು ಮುದ್ದಿಡುತ್ತಿದ್ದೆವು. ನಮ್ಮ ಪ್ರಪಂಚದಲ್ಲಿ ಬೇರಾರಿಗೂ ಎಡೆಯಿಲ್ಲವೆಂದೇ ನಮ್ಮ ಭಾವನೆ. ನೆನಸಿರುವ ಸಂಕಲ್ಪಕ್ಕಾಗಿ ನಮ್ಮ ಸರ್ವಸ್ವವೇ ತ್ಯಾಗವೆನ್ನುವ ಸಂತೋಷ ನಮಗೆ. ಒಂದೊಂದು ದಿನ ಸರಸಾಟವಾಡಿ ತಬ್ಬಿಕೊಂಡೇ ಮಲಗುತ್ತಿದ್ದೆವು. ನಮ್ಮಲ್ಲಿದ್ದ ಸಲಿಗೆಯೆಂದರೆ ಬಾಯಿಯಿಂದಾಡಿ ಇನ್ನೊಬ್ಬನಿಗೆ ತಿಳಿಯಗೊಡುವಂತದ್ದಲ್ಲ. ಆದರೆ ಅದರಲ್ಲೂ ನಾನು ಪಡೆದಿರುವ ವೈಶಿಷ್ಟ್ಯ ಒಂದಿದೆ. ಶ್ರೀನಿವಾಸ ನನ್ನ ಮನಮೆಚ್ಚಿದ ಜೀವದ ಗೆಳೆಯ. ಅವನಿಗಾಗಿ ನನ್ನ ದೇಹ ಆತ್ಮಗಳೆರಡೂ

ಸಾಕ್ಷಿ. ನನ್ನಲ್ಲೂ ಅವನಿಗಿದ್ದ ಭಕ್ತಿ ಅದೇ ನಮ್ಮಲ್ಲಿದ್ದ ಪ್ರೇಮ ಅಗಾಧ ವಾದುದು. ಶ್ರೀನಿವಾಸ ನಿಜವಾದ ಮನುಷ್ಯ. ಮನುಷ್ಯತ್ವವನ್ನೂ ಮನ ಸ್ಸನ್ನೂ ಅಂಕೆಗೆ ತಂದುಕೊಂಡ ಗಂಡು! ನಾನು ಅವನನ್ನು ಅಪ್ಪಿಕೊಳ್ಳು ತ್ತಿದ್ದೆ. ಅವನೂ ನನ್ನನ್ನಪ್ಪಿ ಮುಖಕ್ಕೆ ಮುದ್ದಿಡುತ್ತಿದ್ದ. ನನ್ನ ಮನಸ್ಸು ಹಿಡಿತಕ್ಕೆ ಸಿಗಲಾರದು. ಸರಸಕ್ಕೆ ಕೊನೆಯಿಲ್ಲವೆನ್ನುವಂತಿತ್ತು. ಮನಸ್ಸು ತೃಪ್ತಿಗೊಂಡಂತೆಯೂ ಇರಲಿಲ್ಲ. ಹೃದಯವು ಎಲ್ಲೆ ಮೀರಿದ ಬಯಕೆಯ ತೃಪ್ತಿಗಾಗಿ ಹಾರೈಸುತ್ತಿತ್ತು. ಮನಸ್ಸಿಗೆ ಸುಖವನ್ನನುಭವಿಸುವ ಆಕಾಂಕ್ಷೆ. ಇದಕ್ಕೆ ಅವನ ಬೆಂಬಲವಿಲ್ಲ. ಅವನ ಮನಸ್ಸು ನಿಗೂಢ. ನನ್ನ ಇಚ್ಛೆ ಯಿಂದ ನಾನೆಷ್ಟೋ ಸಲ ಅವನನ್ನು ಬಯಸಿದೆ. ಬಾಯಿಬಿಟ್ಟು ಕೇಳಿ ಕೊಂಡೆ. ಆದರೆ......ಶ್ರೀನಿವಾಸ........ಜಿತೇಂದ್ರನೆನ್ನಬೇಕು. ಅವನನ್ನು ಪರಿಪರಿಯಿಂದ ಒಲಿಸಿಕೊಂಡ ನನಗೆ ಈ ಒಂದು ಚಿಕ್ಕ ಘಟನೆಗಾಗಿ ಅವನ ಮನದ ಸ್ಥಿರತೆಯನ್ನು ಕದಡಿಸಲಾಗಲಿಲ್ಲ. 'ದಾಂಪತ್ಯ ಜೀವನ' ಎನ್ನುವ ಸುಖಕ್ಕೆ ಅವನೊಂದು ಕಾಲವನ್ನು ಪ್ರತ್ಯೇಕವಾಗಿ ಕಲ್ಪಿಸಿಕೊಂಡಿದ್ದ. ನನ್ನ ಆಶೆಯ ಕೋರಿಕೆಗೆ ಪ್ರತಿಯಾಗಿ ಸವಿನೀತಿಯೆಂದರೆ—"ಪ್ರಿಯೆ! ತಾರಾ ನೀನಾರು ಎಂಬುದನ್ನು ನಾನು ಬಲ್ಲೆ. ನಿನ್ನ ನನ್ನ ಸಂಬಂಧ, ನಮ್ಮಿ ರ್ವರ ಆದರ್ಶ, ನಾವು ಹೊಂದಲಿರುವ ಗುರಿ ಇವೆಲ್ಲವನ್ನೂ ನಾನು ಬಲ್ಲೆನು. ಆದರೆ ಇಂದು ನನ್ನ ದೃಷ್ಟಿಯಲ್ಲಿ ನೀನ್ಯಾರೆಂಬುದನ್ನು ನೀನರಿತಿರುವೆಯಾ? ದುಡುಕಿನ ಸಮಯವಿಲ್ಲ. ಯೌವ್ವನದ ಹೊಸ್ತಿಲಲ್ಲಿರುವ ನಮ್ಮಲ್ಲಿ ಯುವ ಸ್ಫೂರ್ತಿಯಿಂದು ಚಿಮ್ಮಿ ಹಾರುತ್ತಿರಬಹುದು. ಆದರೆ ಕಾಲದ ಪರಿ ಸ್ಥಿತಿಗೆ ನಾವೀರ್ವರಿಂದು 'ಸಹೋದರ-ಸಹೋದರಿಯರು.' ಬರೇ ತೋರಿ ಕೆಯ ಸಹೋದರರಲ್ಲ. ಮನಃಪೂರ್ವಕವಾದ ಆದರ್ಶಬಂಧುಗಳು. ನಿನ್ನ ಆಕಾಂಕ್ಷೆಯ ಸೊಬಗಿನಲ್ಲಿ ರಂಜಿಸುವ ದಿನವೂ ಇದೆ. ಅದು ಇಂದಲ್ಲ. ಶೀಘ್ರದಲ್ಲೇ ನಮ್ಮನ್ನು ಸ್ವಾಗತಿಸಬಹುದು. ನಾವಿಂದು ಸರಸವಾಡುತ್ತಿ ದ್ದೇವೆ, ಪರಸ್ಪರ ಅಪ್ಪಿ ಮುದ್ದಾಡುತ್ತೇವೆ. ಅದಕ್ಕೆ ಕಾರಣ ಬೇರೆ. ಪುಷ್ಟಿ ಯಾಗಿರುವ ಬಾಲ ಹಸುಳೆಯನ್ನು ಕಂಡಾಗ ಮಾನವನಾದವನು ಅದರ ಕೋಮಲತೆಯನ್ನು ಕಂಡು ಅದನ್ನು ಮುದ್ದಿಸದೆ ಬಿಡುವುದಿಲ್ಲ. ಅದರಂತೆ ನಿನ್ನೊಡನಾಡುತ್ತಿರುವಾಗ ನಿನ್ನ ಈ ಕೋಮಲ ಮುಖವಾಡವು ನನ್ನನ್ನು

ಮಕ್ಕಳ ರಂಗಕ್ಕೆಳೆದು ಆ ಮನೋಭಾವದಿಂದ ಮುದ್ದಿಸುವಂತೆ ಮಾಡುತ್ತಿದೆ. ಅಲ್ಲದೆ ನನ್ನಲ್ಲಾವ ಕಪಟ ಅತ್ಯಾಚಾರ ಗುಣವೂ ಮನೋಗತವಾಗಿಲ್ಲ. ನನ್ನ ನಿನ್ನ ಗೆಳೆತನ ಪುಟ್ಟ ಮಕ್ಕಳೊಡನಾಟದ ಪ್ರತಿರೂಪ. ನಾವಿಂದು ಕಲಿಯುತ್ತಿರುವ ಹಸುಳೆಯರು. ಕಾಣಲಿರುವ ಪ್ರೌಢ ಜಗತ್ತಿಗೆ ಇನ್ನೂ ಅಂತರವಿದೆ. ಅಂದು ಪ್ರೌಢರಾಗೋಣ. ಇಂದಿನ ಗುರಿ ಸಾಧಿಸೋಣ. ಅಲ್ಲದೆ ಕನಸಿನ ಗುರಿಯನ್ನು ನೆನಸಿ ಸಾಧಿಸಲು ಇಂದೇ ಸುಖ ಪಡಬೇಕೆಂಬ ಆಕಾಂಕ್ಷೆ ನಿನಗಿದ್ದರೆ ನನ್ನ ನಿನ್ನ ಗೆಳೆತನವಿದೀಗಲೇ ಬೇರ್ಪಡಲಿ. ನಾವಿನ್ನೂ ಸಾಧಿಸುವುದು ಬಹಳವಿದೆ. ಅನ್ಯಾಯ ಮಾಡಿದರೆ ದೇವರು ಮೆಚ್ಚಲಿಕ್ಕಿಲ್ಲ. ಇಂದಿದ್ದ ಸರಸವೇ ಮುಂದರಿಯಲಿ ಅದರಿಂದಲೇ ತೃಪ್ತಿಪಡೋಣ. ಇನ್ನೂ ಮುಂದರಿದರೆ ಒದಗಿದ ತಪ್ಪಿಗೆ ಹೊಣೆ ಯಾರು ? ಅದಕ್ಕೆ ಮುಂದಾದರೂ ಶಿಕ್ಷೆ ಇದ್ದೇ ಇದೆ. ಆದರೂ ನಿನ್ನ ಗೆಳೆತನ ಮರೆಯಲಸಾಧ್ಯ." ಎಂದು ಒಮ್ಮೆ ಆರುಹಿ, ತನ್ನೊಡಲಲ್ಲಿ ತುಂಬಿದ ಸುದಾರಿಯನ್ನೆಲ್ಲ ತೋರಿಸಿಬಿಟ್ಟ. ಅಬ್ಬಾ! ಎಂತಹ ದೃಢ ಮನಸ್ಸು ಅವನದು. ಅದರಲ್ಲಿ ಸಮರ್ಥನೂ ಅವನೆ. 'ತಪ್ಪಿ ನಡೆದರೆ ಮೆಚ್ಚನಾ ಜಗದೀಶನು' ಎಂಬುದೇ ಅವನ ಸರಸವಾಟದ ಕೊನೆಯ ನುಡಿ. ಇಂದಿನ ಜಗತ್ತಿನ ಒಂದ ದೃಷ್ಟಿಯಲ್ಲಿ ಅಂತಹವನೇ ಧೀರನು. ದುಡುಕಿದವನ ದುಡುಕಿದವಳ ಬಾಳು ಹಲವು ತಲೆ ಮಾರುಗಳ ಗೋಳು. ಮತ್ತೆ ನಾನು ಶ್ರೀನಿವಾಸನಂತಹ ಜನರನ್ನೂ ಸ್ತ್ರೀಯೆಂದರೆ ಅಷ್ಟು ಭಕ್ತಿಯಿಂದ ತೋರುವವರನ್ನೂ ಕಾಣಲಿಲ್ಲ. ಇದು, ಮತ್ತೆ ನಾನು, ನನ್ನ ಬಾಳನೌಕೆಯಲ್ಲಿ ಕಂಡ ನಿದರ್ಶನ."

೪

"ಅಮ್ಮಾ, ಹನ್ನೆರಡಾಯಿತು. ನಾನಿನ್ನು ಊಟ ತೀರಿಸಿ ಬರುತ್ತೇನೆ."

"ನಿಲ್ಲಿಯಮ್ಮ ಸ್ವಲ್ಪ. ನಾನೆಲ್ಲ ಹೇಳುತ್ತೇನೆ." ಎಂದುಗ್ಗರಿಸಿ ಎದ್ದರು ಶಾಂಭವಿ.

"ಇಲ್ಲಮ್ಮ, ಈಗಲೇ ಬೇಗ ಊಟ ತೀರಿಸಿ ಬರುತ್ತೇನೆ" ಎಂದು ಹೊರಡಲನುವಾದಳು. ಶಾಂಭವಿ ಅವಳ ಕೈಗಳನ್ನು ಹಿಡಿದು ನಿಲ್ಲಿಸಿ:

"ಇದೇನಮ್ಮ ಆಟದಂತೆ, ಹೊಸ ಪುರಾಣಕ್ಕೆ ಹೊರಟೀರೆಂದ್ರೆ. ನಿಲ್ಲಿ; ನಾನೆಲ್ಲ ಹೇಳ್ತೆನಂದೆನಲ್ಲ. ಈಗ ನೀವು ಊಟ ಮಾಡಲು ಹೋಗುವುದು ಬೇಡ. ಇಲ್ಲೇ ಒಟ್ಟಾಗಿ ಊಟ ತೀರಿಸೋಣ."

"ಛೆ! ಬೇಡಮ್ಮ. ನಾನು ಹೇಗೂ ಎಲ್ಲ ತಯಾರಿಸಿಟ್ಟು ಬಂದಿರುವೆನು. ಬೇಡಮ್ಮ.... ನಿಮ್ಮಂಥವರ ಮನೆಯಲ್ಲಿ ಈ ನಿರ್ಭಾಗ್ಯೆ ಊಟ ಮಾಡಬಾರದು. ಇದು ತಿಳಿದು ಮಾಡಿದ ಮಹದಪವಾದ. ಇದಕ್ಕೆ ಕ್ಷಮೆ ಇದ್ದಿರಲಾರದು. ನೀವು ಸಾವಿತ್ರೀ ಸಮಾನರು. ನಾನು ಅಪವಿತ್ರೆ. ನಾಯಿ ತಿಂದ ಎಂಜಲು."

"ಛೀ....ಛೀ....! ಇದೆಲ್ಲ ಏನಮ್ಮ ಪುರಾಣ. ವಿಧಿ ಲೀಲೆಯನ್ನು ನೀವು ನಾನು ನಡೆಸಬಲ್ಲೆವೇ? ಕಾಲದ ಮಹಿಮೆಯಲ್ಲಿ ಒಂದೊಮ್ಮೆ ದುರ್ಘಟನೆಗಳು ನಡೆದು ಹೋಗುತ್ತವೆ. ಮನುಷ್ಯನು ಮಾಡುವುದೇನೂ ಇಲ್ಲಿಲ್ಲ, ಎಲ್ಲಕ್ಕೂ ಪರಮಾತ್ಮನ ಕಟಾಕ್ಷವೇ ಕಾರಣ. ಲೋಕದಲ್ಲಿ ಜನ್ಮ ಕೊಡುವಾಗ ಏನೆಲ್ಲ ಶಿಕ್ಷೆಗಳನ್ನು ವಿಧಿಸಿ ಕಳುಹಿಸುತ್ತಾನೋ ಅದನ್ನೆಲ್ಲ ಅನುಭವಿಸಿಯೇ ತೀರಬೇಕು. ಇದೆಲ್ಲ ಜೀವನದ ಸತ್ವ ಪರೀಕ್ಷೆಗಳು. ಎಂದು ಯಾವನು ತನಗೊದಗಿದ ಕಷ್ಟಗಳನ್ನು ತಾಳ್ಮೆಯಿಂದ ತನ್ನ ಅಧೋನ್ನತಿಗಾಗಿ ಅಧೀರನಾಗದೆ ಸಹಿಸಿ ಬಾಳುತ್ತಾನೋ ಅವನೇ ಆದರ್ಶ ಜೀವಿಯು. ದೇವರ ಪ್ರೀತಿಗೆ ಪಾತ್ರನಾದ ಸದ್ಗುಣಿಯು. ಕೆಲವೊಂದು ಪಾಪಕಾರ್ಯಗಳು ಅವನಿಂದ ನಡೆದಿದ್ದರೂ ಅದಕ್ಕೆ ಮನ್ನಣೆ ಅದೆ. ಇದು ದೇವರ ಸಾಮ್ರಾಜ್ಯದ ವಿಚಿತ್ರ ಲೀಲೆ."

"ಆದರೂ ಆ ಪರೀಕ್ಷೆಯನ್ನು ಸಭ್ಯತೆಯಿಂದ ಸಾಂಗಗೊಳಿಸಿದರೆ ಉತ್ತಮನಾಗಬಹುದು. ಬದಲು, ನೀಚ ವರ್ತನೆಗಳಿಂದ ಜನ, ಮನ ಮೆಚ್ಚದ ರೀತಿಯಲ್ಲಿ ವರ್ತಿಸಿದರೆ, ಚಂಚಲ ಪ್ರವೃತ್ತಿಯ ಮಂಗನಂತೆ, ಒಂದು ಮರದಲ್ಲಿ ಹಣ್ಣು ದೊರೆಯದಿದ್ದಾಗ, ರೆಂಬೆಯಿಂದ ರೆಂಬೆಗೆ ಹಾರಿ ಇನ್ನೊಂದು ಮರವನ್ನು ಆಕ್ರಮಿಸುವಂತೆ, ಸಿಕ್ಕ ಸಿಕ್ಕ ಅಧಮರ ಬಲೆಯಲ್ಲಿ ಬಿದ್ದ ಅಧಮಾಧಮಳೆನಿಸಿದ ನನಗೂ ಮನ್ನಣೆ ಇದ್ದೀತೇ? ಮಾಡುವ ಪಾಪ

ಗಳಿಗೂ ಒಂದು ಮಿತಿ ಇರಬೇಕಲ್ಲವೆ? "

"ಆಗಲಿ. ನೀವೇನೇ ಮಾಡಿದರೂ ನಿಮ್ಮ ಇಂದಿನ ಪರಿಸ್ಥಿತಿಯನ್ನು ಕಾಣುವಾಗ ಮಾಡಿದ ಪಾಪಗಳೆಲ್ಲದರಿಂದಲೂ ಮುಕ್ತರಾಗಿ ಪರಮಾತ್ಮನ ಅನುಗ್ರಹಕ್ಕೆ ಪಾತ್ರಳಾದ ಪೂಜ್ಯಳೆಂದು ತೋರುತ್ತದೆ. ಇಂದು ನಿಮ್ಮ ಬಾಳ ಗಗನದಲ್ಲಿ ಅರುಣೋದಯವಾಗುತ್ತಲಿದೆ. ಆದುದರಿಂದ ಆಗು ಹೋಗುಗಳ ಚರ್ಚೆಗಳೆಲ್ಲ ಮತ್ತೆ. ನಿಮ್ಮ ಮೇಲೆ ನನಗಾವುದೋ ಒಂದು ಗುಪ್ತ ಅಭಿಮಾನ ತಲೆದೋರಿದೆ. ಅದೇನೆಂದು ನಾನರಿಯೆ. ದೇವರ ಮಾಯಾ ಜಾಲಕ್ಕೆ ನಾವೆಂದೂ ಶರಣರೇ. ಆದ್ದರಿಂದ ನನ್ನ ಕೋರಿಕೆಗೆ ನೀವು ಒಡಂಬಡದಿದ್ದರೆ ನನಗೆ ತೃಪ್ತಿಯಿಲ್ಲ. ಇದು ನೀವೀ ತನಕ ನೆನಸ ದಂತಹ ಪಾಪವಾಗಿ ಪರಿಣಮಿಸಲೂ ಬಹುದು. ಆದ್ದರಿಂದ ನಿಮಗಿನ್ನು ಚಿಂತೆ ಬೇಡ. ನೀವಿಲ್ಲೇ ನಿಂತು, ಇಂದಿನ ಊಟ ತೀರಿಸಿದರೆ ನಿಮಗಾವ ನಷ್ಟವೂ ಆಗುವುದಿಲ್ಲ. ಹೃದಯಗಳಲ್ಲಿ ನಿಕಟತೆ ಸ್ಥಿರವಿರುವಾಗ ಅದ ರಂತೆ ನಡೆದುಕೊಳ್ಳಬೇಕು. ಇನ್ನು ಕೈ ತೊಳೆಯಿರಿ. ನಾನು ಎಲೆ ಇಕ್ಕುವೆನು. "

"ಅಲ್ಲಮ್ಮ...... ಇದೇನು ಒತ್ತಾಯ ನಿಮ್ಮದು? ನಾನೆಲ್ಲವನ್ನೂ ಮಾಡಿಟ್ಟು ಬಂದಿದ್ದೇನಲ್ಲ.... "

"ಅಲ್ಲಸಲ್ಲದ ಮಾತುಗಳನ್ನೆಲ್ಲಾ ಮತ್ತೆ ಮಾತಾಡುವಾ. ನೀವೀಗ ಕೈ ತೊಳೆಯಿರಿ. "

ತಾರಳ ಪ್ರಯತ್ನಗಳು ಶಾಂಭವಿಯ ಹಟದೊಲವಿನ ಮುಂದೆ ನಿರರ್ಥಕ ವಾದುವು. ಮುಂದೆ ಮಾತೆತ್ತದೆ ತಾರ ಮೌನವಾಗಿ ಶಾಂಭವಿಯನ್ನು ಅನು ಸರಿಸಿದಳು. ಇಬ್ಬರೂ ಕೈಕಾಲು ಮುಖ ತೊಳೆದು ಬಂದರು. ಶಾಂಭವಿ ಎಲೆ ಹಾಕಿ ಊಟದ ಸಿದ್ಧತೆ ಮಾಡಿದಳು. ಊಟ ಮುಂದುವರಿಯಿತು. ಮಾತಿನ ಗೋಜಿಗೆ ಇಬ್ಬರೂ ಧುಮುಕಲಿಲ್ಲ. ಕೈ ತೊಳೆದು ಹೊರಬರು ವಾಗ ಶಾಂಭವಿ ತಾಂಬೂಲ ತಟ್ಟೆಯನ್ನು ತಾರಳ ಕೈಗಿತ್ತಳು. ತಾನು ಕಸ ಮುಸುರೆ ತೆಗೆದು ಶುದ್ಧ ಮಾಡಿ ಬರುವೆನೆಂದು ಒಳನಡೆದಳು. ತಾರ ಹೊರಬಂದು ಚಾವಡಿಯಲ್ಲಿ ಮಂಡಿಸಿ ವೀಳ್ಯ ಹಾಕತೊಡಗಿದಳು.

ದಿನಕರನು ನಡುನೆತ್ತಿಯನ್ನೇರಿ, ತನ್ನ ದರ್ಪವನ್ನು ತೋರ್ಪಡಿಸಿ,

ಇದೀಗ ತನ್ನ ಸ್ವಗ್ರುಹದತ್ತ ತೆರಳಲು ಕಾಲ್ದೆಗೆಯುತ್ತಿದ್ದನು. ಪ್ರಕೃತಿಯ ಮೇಲೆ ದಿನಪನು ಒಡ್ಡಿದ ಸರ್ವಾಧಿಕಾರದ ಪ್ರಭಾವಕ್ಕೆ ಬಲಿಯಾಗಿ ಸಮಸ್ತ ಜೀವ ಕೋಟಿಗಳೇ ಅರೆಬೆಂದು ಹೋಗಿದ್ದುವು. ಭೂತಲವು ದಿನಪನ ಸರ್ವಾಧಿಕಾರದ ದರ್ಪಕ್ಕೆ ಕಿಡಿಕಿಡಿಗೊಂಡು ಕೋಪೋದ್ವೇಗದಿಂದ ಬುಸುಗುಟ್ಟುತ್ತದೆಯೋ ಎನ್ನುವಂತೆ ಬಿಸಿಯೇರಿತ್ತು. ತಾರ ಅಡಿಕೆ ಜಿಗಿದು ಎಲೆ ಒರಸಿ ಸುಣ್ಣ ಹಚ್ಚುತ್ತಿದ್ದಳು. ಪ್ರಕೃತಿಯ ಉಡಿಯಲ್ಲಿ ಬಿಸುಸುಯ್ಯುತ್ತಿದ್ದ ಗಿಡ ಮರಗಳತ್ತ ತಾರಳ ದೃಷ್ಟಿ ಹರಿಯಿತು. ನೇಸರನ ಕಾವಿಗೆ ಕಳೆಗುಂದಿ ತಾನಿನ್ನು ಶರಣೆ ಎಂಬಂತೆ ಬಾಡಿ ಬಸವಳಿದು ತಲೆಬಾಗಿದ್ದುವು ಎಲೆಗಳು. ಬಾಡಿ ಬಗ್ಗಿರುವ ಸೂರ್ಯಕಾಂತಿಯ ಗಿಡವೊಂದರಲ್ಲಿನ ಪುಷ್ಪವು ತನ್ನ ರಮಣನ ಸರಸ ಕುಚೇಷ್ಟೆಗಳಿಗೆ ಗಂಭೀರ ತಾಳಿಯೋ ಅಥವಾ ಪ್ರಣಯ ಚೇಷ್ಟೆಯಿಂದ ನಿರಾಕೃತಳಾಗಿ ಕುಪಿತಳಾಗಿಯೋ ಎಂಬಂತೆ ಬಿಳಿದಾಗಿ ಸೊಬಗ ಬೀರುತ್ತಿದ್ದುದು ಇದೀಗ ಕೆಂಬಣ್ಣ ತಾಳಿ, ನಿಡಿದಾಗಿ ನೀಡಿಕೊಂಡಿದ್ದ ಕತ್ತನ್ನೂ ಬಗ್ಗಿಸಿ ಆಯಾಸದಿಂದ ನಿಸ್ಸಾರವನ್ನು ಸೂಚಿಸುವಂತೆ ತೋರುತ್ತಿತ್ತು. ಎಲೆಗಳನ್ನು ಮಡಚುತ್ತಿದ್ದ ತಾರಳಿಗೆ....ಅದು ರಂಜಿಸುತ್ತಿದ್ದ ರಂಜನೆ....ಇದೀಗ ಕಂದಿ ಹೋಗಿ ಕುಂದಿದ ಪರಿವರ್ತನೆ ತನ್ನ ಬಾಳಚಿತ್ರದ ನೆನಪನ್ನು ಮೂಡಿಸಿತು. ಸೃಷ್ಟಿಯ ನಿಯಮವನ್ನೇ ನಿಕ್ಷಿಸುತ್ತಿದ್ದ ಅವಳಿಗೆ ಮಡಚಿ ಕೈಯಲ್ಲಿ ಹಿಡಿದ ಎಲೆಯನ್ನು ಮರೆಯಿಸಿತು.

ಶಾಂಭವಿ, ಉಂಡ ಸ್ಥಳವನ್ನೆಲ್ಲ ಸಾರಿಸಿ, ನಿರ್ಮಲಗೈದು ಹೊರ ಬಂದಳು. ತಾರಳ ಬೆರಗು ಸ್ವರೂಪವನ್ನು ಕಂಡು ಅದೇನೋ ನೋಡಿಕೊಂಡು ಆಯಾಸ ಕಳೆಯುತ್ತಿರಬಹುದೆಂದು ನೆನಸಿ ಪಕ್ಕದಲ್ಲೇ ವೈಯೂರಿ ಕುಳಿತು ವೀಳ್ಯ ತಟ್ಟೆಗೆ ಕೈ ಹಾಕುತ್ತಾ, " ಏನಮ್ಮ, ಆಲೋಚನೆ ಮಾಡುತ್ತಿದ್ದೀರಲ್ಲ. ನನ್ನ ಒತ್ತಾಯದಿಂದ ಬೇಸರವಾಯಿತೇ ? "

" ಒತ್ತಾಯವೇನೂ ಇಲ್ಲಮ್ಮ. ಅದರಲ್ಲೇನು ಬೇಸರ. ನಿಮ್ಮ ಪ್ರೀತಿ ಮಾತ್ರ ನನ್ನಲ್ಲಿ ಸದಾ ಹರಿಯುತ್ತಿದ್ದರೆ ಸಾಕು. ನಾನೇನೋ ಆ ಸೂರ್ಯಕಾಂತಿಯ ಗಿಡವನ್ನೂ ಅದರ ಪುಷ್ಪವನ್ನೂ ನೋಡಿ ಕುಳಿತಿದ್ದೆ. ಈ ಮಳೆಗಾಲದ ಬಿಸಿಲ ಆಟವೆಂದರೆ ಊರಿಗೆಂತಹ ಕಾಟವಾಗಿದೆ ನೋಡಿ. ಬೆಳಿಗ್ಗೆ ಸೊಂಪಾಗಿದ್ದ ಗಿಡವೀಗ ಬಾಡಿಕೊಂಡಿದೆ. "

" ಹೌದಮ್ಮ. ಗಿಡಮರಗಳು ದಿನನಿತ್ಯ ಈ ಬದಲಾವಣೆಗಳನ್ನೂ, ಈ ಕಷ್ಟ ಸುಖಗಳನ್ನೂ ಅನುಭವಿಸುತ್ತವೆ. ಮಾನವನು ಮಾತ್ರ ದೀರ್ಘ ಕಾಲ ಸುಖವನ್ನೂ ಕಷ್ಟವನ್ನೂ ಸಹಿಸಬೇಕಾಗಿದೆ. ಇಷ್ಟೇ ಭೇದ."

" ಬಾಳ್ವೆಯಷ್ಟು ಕಠಿಣವಾದುದು ಈ ಪ್ರಪಂಚದಲ್ಲಿ ಇನ್ನೊಂದಿಲ್ಲ. ಅದಕ್ಕಾಗಿ ನಾವೆಷ್ಟು ಮಾತಾಡಿದರೂ ಪ್ರಯೋಜನವಿಲ್ಲ ದೈವಲೀಲೆಗೆ ಇದರಲ್ಲಿ ಪ್ರಾಮುಖ್ಯತೆ. ನಾವಿನ್ನು ನಮ್ಮ ಕೆಲಸ ಮುಂದುವರಿಸೋಣ."

" ಸ್ವಲ್ಪ ವಿಶ್ರಾಂತಿ ಪಡಕೊಳ್ಳಿ. ನಿದಾನ ಬೀಸಿದರಾಯಿತು."

" ಸುಮ್ಮನೆ ಕುಳಿತಿರುವುದೇ ಬೇಸರ. ಅದರಷ್ಟು ಆಲಸ್ಯ ಇನ್ನೊಂದಿಲ್ಲ. ನಾವೀಗಲೇ ಸುರು ಮಾಡಿದರೆ ಬೇಗನೆ ಮುಗಿಯಬಹುದು."

" ಆಯಿತಮ್ಮ. ನಿಮ್ಮ ಹುರುಪೆಂದರೆ ನನ್ನ ಸಾಫಲ್ಯತೆ. ನಿಮ್ಮ ಉದಾರತೆಯಿಂದ ನಿಮಗೆಲ್ಲಿಯೂ ಮನ್ನಣೆಯಿದೆಯಮ್ಮ. ನೀವು ಕಲ್ಪಿಸಿಕೊಂಡ ಭಾವನೆಗಳು ಮಾತ್ರ ತೀರಾ ವಿರೋಧ. ನೀವು ನಿಮ್ಮ ಹಳೆಯ ನೆನಹುಗಳನ್ನೆಲ್ಲಾ ಮರೆತು. ನಿಶ್ಚಿಂತರಾಗಿರಬೇಕು." ಎಂದು ಎದ್ದೇಳುತ್ತ ವೀಳ್ಯರಸವನ್ನು ಹೊರಕ್ಕುಗುಳಿ ಕಲ್ಲಿನ ಸಮೀಪ ಬಂದಳು. ಪುನಃ ಕಲ್ಲು ತಿರುಗತೊಡಗಿತು. ತಾರ ತನ್ನ ಕಥೆ ಮುಂದುವರಿಸಿದಳು:

" ಅಂತೂ ಪರೀಕ್ಷೆ ಮುಗಿಯಿತು. ಆ ವರೆಗೂ ನಮ್ಮ ಸರಸಕ್ಕೆ ಕೊನೆಯಿರಲಿಲ್ಲ. ಆದರೆ ಕೆಲವು ಊರ ಮತ್ಸರಿಗಳಿಗೆ ಇದು ಇನ್ನು ಸಹನೆ ಮೀರಿತ್ತು. ಏನೇನೋ ಕುಟಿಲೋಪಾಯುಗಳು ನಡೆಯುತ್ತಿದ್ದುವು. ಆದರೆ ಅದೆಲ್ಲವೂ ನಾನು ಮೊದಲಂದಂತೆ, ನಮ್ಮೆದಿರಲ್ಲಿ ಸಾರ್ಥಕವಾಗಲಿಲ್ಲ. ಈ ಸಮಯದಲ್ಲಿ ನಮ್ಮ ಸಂಬಂಧಿಕರೋರ್ವರು ತಮ್ಮ ಚಾಣಾಕ್ಷತನದಿಂದ ಮನೆಯವರಿಗೆ ನನ್ನ ವರ್ತನೆ ವಿವರಿಸಿ ಜೋರಾಗಿ ಪತ್ರ ಬರೆದು ತಿಳಿಸಿ, ಹೆತ್ತವರಿಗೆ ಹೆದರಿಕೆ ಹುಟ್ಟಿಸಿ, ಜಾಗ್ರತೆ ಹೇಳಿದರು. ಹೆತ್ತವರು ದಿಗ್ಭ್ರಾಂತರಾದರು. ಇದ್ದ ಒಬ್ಬಳು ಹುಡುಗಿ ಹಾಳಾದಳು ! ತಮ್ಮ ಕುಲಕ್ಕೆ ಕಳಂಕ ತಂದೊಡ್ಡಿದಳು. ಮತ್ತಾರೋ ಪುಣ್ಯಾತ್ಮರು ನನ್ನ ತಂದೆಯವರನ್ನು ಕಂಡು, ನನ್ನೆಲ್ಲಾ ವರ್ತನೆಗಳಿಗೆ ಬಣ್ಣ ಬರೆದು ತಿಳಿಸಿದರು. ' ಹುಡುಗಿಗೆ ಸಲಗೆ ಕೊಡಬೇಡಿ.... ಬೇಗನೆ ಯಾರ ಕೊರಳಿಗಾದರೂ ಕಟ್ಟಿಬಿಡಿ...." ಎಂದು ಏನೇನೋ ಬರೆದು ತಂದೆಯವರ ಮೆಚ್ಚಿಗೆ ಪಡೆದರು. ಎಲ್ಲಾ ಮತ್ಸ

ರದ ಮುದ್ದೆಗಳು. ತಮ್ಮ ಮೋಸದ ಬಲೆಗೆ ಬೀಳಲಿಲ್ಲ ಎಂದು ಇತರರನ್ನು ಬಲಿಕೊಡುವ ಹವ್ಯಾಸ ಆ ಧೂರ್ತರದು !

ಮರು ಟಪ್ಪಾಲಿಗೆ ತಂದೆಯವರ ಕರೆ ಬಂದಿತು. ಪರೀಕ್ಷೆ ಮುಗಿದೊಡನೆ ಮನೆಗೆ ಬರಬೇಕು. ಇಲ್ಲಿ ಮಹತ್ಕಾರ್ಯವೊಂದು ಜರಗಲಿದೆ. ಎಂದು ಬರೆದಿದ್ದರು.

" ತಂದೆಯ ಅಪ್ಪಣೆಯಂತೆ ಊರು ಸೇರಿದೆ. ಮನೆ ಸೇರಿದ್ದೇ ತಡ. ತಂದೆಯವರ ತಾಂಡವ ನೃತ್ಯಕ್ಕೂ, ತಾಯಿಯ ಕಣ್ಣೀರ ತಾಳಕ್ಕೂ ಪ್ರಾರಂಭವಾಯಿತು. ಬುದ್ಧಿಯಿಂದ ನೀತಿಗೂ, ಹೊಗಳುವಿಕೆಯಿಂದ ತೆಗಳುವಿಕೆಗೂ ಒಂದೇ ಉಗ್ರಾಣವೆನ್ನುವಂತೆ ಹೀನಾಮಾನ ಬೈಗಳದ ಸುರಿಮಳೆ. ಕೋಪದ ಉರಿಯಲ್ಲಿ ಮಗಳೆಂಬ ಭಾವನೆಯಿಲ್ಲದೆ ಬಾಯಿಗೆ ಬಂದ ಹೆಸರು ಹಿಡಿದು ಕರೆದು, ಮೊದಲೇ ತುಂಟರೆನಿಸಿಕೊಂಡ ಕಾಲೇಜು ಹುಡುಗರ ಪ್ರಣಯ ಚೇಷ್ಟೆಗೆ ಎಡೆ ಕೊಡುವವರು ನನ್ನಂತಹ ' ಧೂರ್ತ ಪಿಶಾಚಿಗಳೇ ' ಎಂದು ಶಪಿಸಿದರು. ಇದರ ಈ ಎಲ್ಲ ಅಂತರ್ಲಾಗದ ಹಾರಾಟಗಳಿಗೆ ನಾನೆಂದೂ ಉತ್ತರ ಕೊಡದೆ, ಮೌನವಾಗಿಯೇ ಇದ್ದೆ. ಇನ್ನು ನನ್ನನ್ನು ಹೀಗೇ ಬಿಟ್ಟರೆ ಅವರು ಮುಖಕ್ಕೆ ಮಸಿ ಬಳಿದುಕೊಂಡು ಮುಖ ಮರೆಸಿಕೊಳ್ಳಬೇಕಾದೀತು ಎಂದು ಗಂಡಿನ ಬೇಟೆಗೆ ಹೊರಟರು.

" ವರದಕ್ಷಿಣೆ ಸುರಿಯದೆ ವಿವಾಹವಾಗುವವರಾದರೂ ಇದ್ದಾರೆಯೆ ? ಎಳೆ ಪ್ರಾಯದಲ್ಲೇ ನಿರಾಕರಿಸಿದವರು ಈಗ ಪ್ರಾಯ ತುಂಬಿದಾಗ ಪಣಕ್ಕೆ ಬಾಯ್ಬಿಡದಿರುವರೇ ? ಇಲ್ಲದೆ, ನನ್ನ ಮೇಲಿನ ಅಪಪ್ರಚಾರವೆಲ್ಲ ಮನೆ ಮನೆಗೆ ಹರಡಿದ್ದು ಊರಿಗೆಲ್ಲ ನನ್ನ ಸುದ್ದಿಯೇ ಆಗಿತ್ತು. ಇನ್ನು ನನ್ನ ತಂದೆಯ ಪರಿಸ್ಥಿತಿ ಹೇಳಿ ಪ್ರಯೋಜನವಿದೆಯೇ ? ಮಾತೆತ್ತಿದ ಗಂಡು ಮುಖ ಗಂಟಿಕ್ಕಿ ಓಡಿ ಬರಲಾರಂಭಿಸುತ್ತಿದ್ದರು. ಎಲ್ಲಕ್ಕೂ ನನ್ನ ಅದೃಷ್ಟ ಬಲವೆನ್ನಬೇಕು. ನಾನೆಲ್ಲಿಯಾದರೂ ಮನೆಯಿಂದ ಹೊರಹೊರಟೆನೆಂದರೆ ಹೊರಬಂದು ಬಾಗಿಲ ಬಳಿ ನಿಂತು ನನ್ನನ್ನು ನೋಡುವವರೆಷ್ಟು ಮಂದಿ ? ಮನೆ ಮಂದಿಯರೊಡನೆ ' ಗುಜು ಗುಜು ' ಎಂದು ಪಿಸುಗುಟ್ಟುವರೆಷ್ಟು ಮಂದಿ. ದಿಟ್ಟ ಹುಡುಗೆ, ಮಾರಿ, ಹೆಮ್ಮಾರಿಯೆಂದು ಎಷ್ಟೋ ಯುವಕ ಮುದುಕರು ಅಂಗಡಿ ಬಾಗಿಲಲ್ಲಿ ಕುಳಿತು ನನ್ನ ಕಿವಿಗೆ ಕೇಳುವಂತೆ ಅರಚು

ವವರೆಷ್ಟು ಮಂದಿ. ಆದರೆ ನಾನು ಅವರ ಅವಹೇಳನೆಗೆ ಅಂಜಲಿಲ್ಲ. ನನ್ನ ಸುದ್ದಿ ಎತ್ತುವವರ ಮುಂದೆ ಮತ್ತಷ್ಟು ದಿಟ್ಟತನದಿಂದ ಸುಳಿಯಲಾರಂಭಿಸಿದೆ. ತಪ್ಪಿ ನಡೆದಿದ್ದರಲ್ಲವೇ ನನಗೆ ಹೆದರಿಕೆ. ಶ್ರೀನಿವಾಸನ ವಿವೇಕ ನನ್ನನ್ನಂದು ರಕ್ಷಿಸಿತು. ನಾವೇನೇ ಆಡಿಕೊಂಡಿದ್ದರೂ ಮನಸ್ಸಿನ ನೈರ್ಮಲ್ಯತೆ ಕದಡಿರಲಿಲ್ಲ. ಅವನ ದೂರದೃಷ್ಟಿಯಿಂದ ನನ್ನ ವರ್ತನೆಯೆಂತಿದ್ದರೂ ನಾನು ಆ ವರೆಗೆ ಪವಿತ್ರಳಾಗಿಯೇ ಇದ್ದೆ. ಅದೇ ನನ್ನಂತೆ ಅವನೂ ದುಡುಕಿದ್ದಲ್ಲಿ ನನಗೆ ಸ್ಥಾನವೇ ಇರುತ್ತಿದ್ದಿಲ್ಲ. ನಾನು ಅಂದು ಬೇಡಿದ ಪ್ರಣಯ ಭಿಕ್ಷೆ ಶ್ರೀನಿವಾಸನ ಹಿತನುಡಿಗಳಿಂದ ತೃಪ್ತಿಹೊಂದಿ, ನನಗೆ ಬೆಂಬಲವಾಗಿ ನಿಂತಿತ್ತು. ”

“ಗಂಡು ಬೇಟೆಗೆ ಹೊರಟ ನನ್ನ ತಂದೆಯವರಿಗೆ ಅಪಜಯವೇ ಇದಿರಾಗುತ್ತಿತ್ತು. ಕೊನೆಗೆ ಅವರಿಗೆ ಗಂಟು ಬಿದ್ದವನೊಬ್ಬ ವಿಧುರ. ಅವರ ಪ್ರಾಯಕ್ಕೆ ಸರಿಬೀಳುವ ಮಂಜು ಮುಸುಕಿದ ಕಣ್ಣಿನ ‘ಯುವಕ’ನು ಅವನು. ಮೊದಲೆರಡು ವಿವಾಹವಾಗಿದ್ದು, ತನ್ನ ಭಾಗ್ಯಲಕ್ಷಣದಿಂದ ಅವರನ್ನು ಮುಕ್ಕಿ ತಿಂದು, ಈಗ ಮೂರನೆ ಬಲಿಗೆ ಕೈಯೊಡ್ಡಿದ್ದ. ಹಣದ ಮದದಿಂದ ತುಳುಕಾಡುತ್ತಿದ್ದ ಅವನಿಗೆ ಹೆಣ್ಣು ಹುಚ್ಚು ಬಿಟ್ಟಿರಲಿಲ್ಲ. ಅದಕ್ಕೆ ಬಲಿಯಾಗಿ ಭಾಗ್ಯಹೀನೆ ನಾನೇ ದೊರೆಯಬೇಕೆ? ನಿರ್ದಯರಾದ ತಂದೆ ಒತ್ತಾಯದಿಂದ ನನ್ನನ್ನು ಒಪ್ಪಿಸಬೇಕಾಯಿತು. ಅವನಂತೂ ಮೊದಲೇ ಒಪ್ಪಿಬಿಟ್ಟಿದ್ದಾನೆ. ಹೆಣ್ಣು ಹುಚ್ಚಿನಿಂದ ಒರೆಟುಗೊಂಡಿದ್ದ ಅವನಿಗೆ ಹಸಿ ಯೌವ್ವನದ ಬಾಲೆ ದೊರೆಯುವಾಗ ಬೇಡವೆಂದಾನೆ ?]

“ಒಣಗಿದ ಕೊರಡಿನೊಂದಿಗೆ ಹಸಿ ಚಿಗುರೊಂದರ ವಿಕ್ರಯವಾಯಿತು. ಅಂತೂ ತಂದೆ ತಾಯಿಯರ ಭಾರವೊಂದು ತಲೆಯಿಂದಿಳಿದಂತಾಯಿತು. ಅವರಿಗಿನ್ನಾವ ಉಪದ್ರವೂ ಉಳಿದಿಲ್ಲ. ಇನ್ನು ನನ್ನ ಜೀವನ ! ತರುಣ ಪತಿಯೊಂದಿಗೆ ಕೂಡಿ, ಆಡಿ, ಸರಸದ ಸುರಸ ಜೀವನವನ್ನು ನಡೆಯಿಸಿ, ಸಂಸಾರ ನೌಕೆಯಲ್ಲಿ ವಿಹರಿಸಿ, ಆನಂದದಾಯಕ ಜೀವನವನ್ನು ಸಾಗಿಸಬೇಕೆಂದು ಬಗೆದ ನನ್ನ ಆಶಾಗೋಪುರ, ಸಮಾಜದ ಕ್ರೂರ ನೀತಿಯ ಬೆದರಿಕೆಗೆ ಅಂಜಿದ ತಂದೆ ತಾಯಿಗಳ ದೆಸೆಯಿಂದ ಮುದಿಗೂಬೆಯೊಬ್ಬನ ಕೈಹಿಡಿದು, ಕಾಲಕಸವಾಗಿ ಹೋಯಿತು. ಅಂದು ಶ್ರೀನಿವಾಸನೊಡನೆ ಅಪ್ಪಿ ಮುದ್ದಾಡಿ ಪಡು

ತ್ತಿದ್ದ ಸುಖ.........ಇಂದು ಈ ಮುದಿಯನ ಸುಕ್ಕುಗಟ್ಟಿದ ಮುಖ ಕಂಡೊಡನೆ ಮೃತ್ಯುವೇದನೆಯಾಗಿ ಪರಿಣಮಿಸುತ್ತಿತ್ತು. ಅವನಲ್ಲಿ ಸಂಪತ್ತಿಗೇನೂ ಕಡಿಮೆ ಯಿರಲಿಲ್ಲ. ಅಪಾರ ಹಣವಂತನಾದರೂ ಲೋಭತನದ ರುದ್ರ ಪಿಶಾಚಿ ಯುವನು. ಅವನ ದರ್ಶನವೆಂದರೆ ಕೈಯಲ್ಲಿ ಪಾಶವಿಡಿದು ನಿಂತಿರುವ ಕಾಲನ ಕೈಸಾಟದಂತಾಗುತ್ತಿತ್ತು. ದಿನಂಪ್ರತಿ ಅವನ ಪೀಡನೆ ತಪ್ಪಿದಂತಿರಲಿಲ್ಲ. ಅವನ ಕಾಮದಾಹದ ಬೇಗೆಯಿಂದ ನನ್ನ ಎಳೇ ಶರೀರವೇ ಬೆಂದು ಬಸವಳಿ ಯುತ್ತಿತ್ತು. ದಿನನಿತ್ಯದ ಅವನ ಘೋರ ಸಹವಾಸ ನನ್ನನ್ನು ನಿಸ್ಸಾರ ಗೊಳಿಸಿತು.

" ದಿನ ಹೋದಂತೆ ಅವನ ಉಪದ್ರ ಹೆಚ್ಚಾಯಿತು. ಕಂಡಕಂಡಲ್ಲಿ ತನ್ನ ಮುದಿಚೇಷ್ಟೆಗಳಿಗಾರಂಭಿಸಿದ. ಹೆಜ್ಜೆಹೆಜ್ಜೆಗಳಿಗೂ ನನ್ನನ್ನು ಅಪ್ಪಿ ಮುದ್ದಾಡಲು ಮುಂದಾಗುತ್ತಿದ್ದ. ಈ ಎಲ್ಲ ಹಾಳು ವರ್ತನೆ ನನ್ನ ಸಹನೆ ಮೀರಿತು. ಇದ್ದ ಅಲ್ಪ ಸ್ವಲ್ಪ ಆಶಾಧೂಳಿಯೂ ಅವನ ದುಷ್ಟ ಕಾಮ ಲಾಲಸೆಯಿಂದ ಹಾರಿಹೋಯಿತು. ನನ್ನ ಜೀವನದ ಗುರಿಯನ್ನು ಸುಗಮ ಗೊಳಿಸಲು ಬಯಸಿದ ಶ್ರೀನಿವಾಸನೆಲ್ಲಿ? ಈ ಪಿಶಾಚಿ ಎಲ್ಲಿ? ಎಂಬ ಹೋಲಿಕೆಯು ನನ್ನ ಮನಸ್ಸಿನಲ್ಲಿ ಇನ್ನಷ್ಟು ದುಗುಡವನ್ನು ಹೇರಿಬಿಡುತ್ತಿತ್ತು. ಶ್ರೀನಿವಾಸನ ಅಚ್ಚಳಿದ ಹೃದಯವನ್ನೂ ಸವಿ ಬೋಧನೆಗಳ ಮಾತುಗ ಳನ್ನೂ ಇವನ ನಡೆ ನುಡಿಗಳೊಂದಿಗೆ ಹೋಲಿಸಿದೆ. ಅದೇನು ಅಜಗಜಾಂ ತರ? ಹಣವಿದ್ದ ಮಾತ್ರಕ್ಕೆ ಮನುಷ್ಯ ಸುಭಿಕ್ಷನಾಗಲಿಲ್ಲ. ಅವನ ಗುಣವೇ ಅವನ ಅಂತರ್ಯವನ್ನರಿತು, ಹೃದಯದಲ್ಲಡಗಿದ ಪ್ರೇಮವನ್ನು ಅಳೆಯುವ ಮಾನದಂಡ. ನನಗೆ ಅವನೊಡನೆ ಸಂಸಾರ ನಡೆಸುವ ಇಷ್ಟ ಉಳಿಯಲಿಲ್ಲ. ತಾಳ್ಮೆಯ ತಾಳ ಹದಗೆಟ್ಟಿತು. ಕೊನೆಯ ನಿರ್ಧಾರದಲ್ಲಿ ಶ್ರೀನಿವಾಸನನ್ನೇ ಮರೆಹೋಗುವುದು ಉತ್ತಮವೆಂದು ಕಂಡಿತು. ದುಡುಕಿನಿಂದ ಮದುವೆ ನಡೆದಿದ್ದರೂ ಅವನ ಉದಾರ ಹೃದಯದ ಪ್ರೇಮತಲದಲ್ಲಿ ನನಗೆ ಮನ್ನಣೆ ಯಿದೆ. ನನ್ನ ಹೊಣೆ ಹೊರಲು ಅವನೆಂದೂ ಸಿದ್ಧನೆಂದು ನನ್ನ ಅಭಿಮಾನ. ಒಂದು ವೇಳೆ ಅವನು ನಿರಾಕರಿಸುವದಾದರೂ ಅವನ ಚರಣದಾಸಿಯಾಗಿ ಬಾಳುವುದೇ ಮಿಗಿಲೆಂದು ತೋರಿತು. ಆದರೂ ಈ ಮುದಿಯನ ಸುಖದ ಶೋಭನ ಬೇಡವೆಂದೇ ನಿರ್ಧಾರ. ತಂತ್ರ ಹೂಡಿ, ಸಮಯ ಸಾಧಿಸಿ

ಅವನು ನಿದ್ರಿಸುವ ಕಾಲದಲ್ಲಿ ಪೆಟ್ಟಿಗೆಯಿಂದ ಮುನ್ನೂರು ರೂಪಾಯಿ ದೋಚಿಕೊಂಡು ನನ್ನ ಒಂದೆರಡು ಆಭರಣಗಳನ್ನು ಹಿಡಿದುಕೊಂಡು ಆ ಮನೆಯಿಂದ ಹೊರಟೆ. ರಾತ್ರಿಯಲ್ಲಿ ಹೊರಗೆ ಹೊರಡುವದೆಂದರೆ ಪ್ರಾಣಸಂಕಟವಾಗುತ್ತಿದ್ದ ನನಗೆ, ಅಂದು ಮಾತ್ರ ಭಯದ ಚಿಗುರೇ ಮೊಳೆಯಲಿಲ್ಲ. ಕಾಳರಾತ್ರಿಯಲ್ಲಿ ಯಾವುದೋ ಒಂದು ಸ್ಫೂರ್ತಿಯಿಂದ ಹೊರಟಿದ್ದೆ. ನಾನು ಹೊರಡುವ ಮೊದಲು 'ಪತಿ' ಗೊಂದು ಪತ್ರವನ್ನು ಬರೆದಿಟ್ಟೆ. "ಗಂಡನ ಕಾಮ ಪ್ರೇಮದ ದಾಹಕ್ಕೆ ಸೋತು ಸುಕ್ಕುಗಟ್ಟಿ, ಉಪದ್ರವನ್ನು ಸಹಿಸಲಾರದೆ, ಇಹದ ಬಂಧನದಿಂದ ಪಾರಾಗಲು ಸಮುದ್ರರಾಜನನ್ನು ಮರೆಹೊಕ್ಕಿರುವೆನು. ಇನ್ನು ನನ್ನನ್ನು ಶೋಧಿಸಿ ಉದ್ಧರಿಸುವ ಹವ್ಯಾಸಕ್ಕೊಳಗಾಗಿ ಸಾಹಸಪಡುವ ಅವಶ್ಯಕತೆಯಿಲ್ಲ. ಈ ಸಮಯದಲ್ಲಿ ನಾನೆತ್ತಲೋ ಸಾಗಿರುವೆನು. ಇನ್ನಾದರೂ ಮುದಿಯನು ಬಾಲ ಹಸುಳೆಯನ್ನು ಕೊರಳಿಗೆ ಕಟ್ಟಿಕೊಳ್ಳುವ ಆಸೆಯಿಂದ ದೂರವಾಗಿರಲಿ. ಅಲ್ಲದೆ, ನನ್ನ ದುರ್ವಿಧಿಯನ್ನು ಕಂಡ ನರಜೀವಿಗಳಾರೂ ನಿಮಗಿನ್ನು ಹೆಣ್ಣು ಕೊಡಲಾರರು; ಕೊಡಲೂ ಬಾರದು. ಇನ್ನಾದರೂ ವಿವಾಹಕ್ಕಾಗಿ ಮುಂದಾಗದೆ, ನಿಮ್ಮ ಮಾನವನ್ನು ಮಾರಿಕೊಳ್ಳದೆ ನಿಮ್ಮಷ್ಟಕ್ಕೆ ಕುಳಿತುಬಿಡುವುದು ಒಳಿತು." ಎಂದಷ್ಟು ಬರೆದು ಹೊರಟಿದ್ದೆ.

"ಪ್ರಾತಃಕಾಲ ನಾಲ್ಕುವರೆಗೆ ಹೊರಡುವ ಮೊದಲ ಬಸ್ಸಿನಲ್ಲಿ ಹೊರಟು ಮಂಗಳೂರು ಸೇರಿದೆ. ಹಂಪನಕಟ್ಟೆ ಸ್ಟೇಂಡಿನಲ್ಲಿ ಬಸ್ ಇಳಿದು ಶ್ರೀನಿವಾಸನ ರೂಮಿನತ್ತ ಗಾಡಿ ಮಾಡಿ ಹೊರಟೆ. ಗಾಡಿಯು ಕದಿರೆಯ ದಾರಿ ಹಿಡಿಯಿತು. ಹೋಗುವಾಗ ಹಾದಿಯಲ್ಲಿ ನಾನು ಉಳಿದುಕೊಂಡ ಹಾಸ್ಟೆಲು, ಅಲ್ಲಿನ ನನ್ನ ಕೋಣೆ....ಅಲ್ಲಾರೋ ಯುವತಿ ಬಾಗಿಲಿಗೊರಗಿ ನಿಂತಿದ್ದಳು. ಬಹುಶಃ ಅವಳೇ ಅದರಲ್ಲೀಗ ನೆಲಸಿರುವವಳಿರಬೇಕು. ಆಯಾಸಗೊಂಡಿದ್ದ ನನಗೆ ಆ ಕೋಣೆಯ ನೆನಪಾದೊಡನೆ ನವಚೇತನವೇರಿ ಬಂದಂತಾಯಿತು. ನಾವು ಕಳೆದ ದಿನಗಳ ಸವಿ ನೆನಪು ಮನದ ತೆರೆಯಲ್ಲಿ ಸರಿಯತೊಡಗಿತು. ಅಂದಿನ ಆನಂದ ದಿನಗಳು ಇಂದು ಒದಗಿದ ದುಸ್ಥಿತಿಯ ಮುಂದೆ ಮಾಸಿ ಹೋದುವು. ಮನಸ್ಸಿನ ದುಗುಡ ಉಕ್ಕಿ ಕಣ್ಣಿನ ಮಾರ್ಗವಾಗಿ, ಅಶ್ರು ರೂಪದಿಂದ ಹರಿಯತೊಡಗಿತು. ಬಂಡಿ ಸಾಗಿತ್ತು. ಶ್ರೀನಿವಾಸನ ಬಿಡಾರದ

ಬಳಿಯಲ್ಲಿ ನಿಂತಿತು. ಬಂಡಿಯವನಿಗೆ ಹಣ ತೆತ್ತು, ಶ್ರೀನಿವಾಸನ ದರ್ಶನಕ್ಕಾಗಿ ಓಡಿದೆ. ಅವನು ಅಲ್ಲಿರಲಿಲ್ಲ. ಯಾರೋ ಯುವಕನು ಅವನ ವಿಚಾರವಾಗಿ: ಶ್ರೀನಿವಾಸನು ಮುಂದಿನ ವಿದ್ಯಾಭ್ಯಾಸಕ್ಕಾಗಿ ಮದ್ರಾಸಿಗೆ ಹೋಗಿದ್ದಾನೆಂದು ತಿಳಿಸಿದ. ನನಗೆ ಸಿಡಿಲೆರಗಿದಂತಾಯಿತು. ಮುಂದೇನು ಮಾಡಲೆಂದು ದಿಕ್ಕು ತೋರದಾಯಿತು. ಮಂಗಳೂರಲ್ಲಿ ಉಳಿದರೂ ಅಪಾಯ; ಬದುಕಿ ಉಳಿದಿರುವೆನೆಂದು ಯಾರಾದರೂ ಮನೆಗೆ ತಿಳಿಸಿದರೆ.... ಮತ್ತೆ ಅದೇ ಒರಟು ಮುಖಕ್ಕೆ ಮುತ್ತಿಕ್ಕಬೇಕು. ಅದೇ ವೃದ್ಧನೊಡನೆ ಪತಿಯೆಂದು ಸರಸ ಸಲ್ಲಾಪಗೈಯ್ಯಬೇಕು. ಅವನ ಬೆನ್ನ ಹಿಂದೆ ಸಂಚರಿಸಬೇಕು. ಅದೇ ದಂಟೆ ಕೋಲು ಹಿಡಿದು ತಲೆಗೆ ರುಮಾಲು ಸುತ್ತಿದ ಸುಕ್ಕು ಮುಖ ಕಣ್ಣಿಗೆ ಕಟ್ಟಿದಂತಾಗಿ ಬೆದರಿದೆ. ಮನೋದೇವನಾದ ಶ್ರೀನಿವಾಸನಿಗಾಗಿ ಪರಿತಪಿಸಿದೆ.

“ ಮುಂದೆ....ಭಾವೀ ಪತಿಯನ್ನು ಅರಸಿಕೊಂಡು ಮದ್ರಾಸಿಗೆ ಹೊರಡುವುದೇ ಉತ್ತಮವೆಂದು ತೋರಿತು. ಅದೇ ಉತ್ತಮ ಮಾರ್ಗವೆಂದು ನಿರ್ಧರಿಸಿ, ಅಂಗಡಿಗೆ ಹೋಗಿ ಒಂದೆರಡು ಸೀರೆ ಖರೀದಿ ಮಾಡಿ, ಸಣ್ಣದೊಂದು ಸೂಟ್ ಕೇಸ್‌ದಲ್ಲಿ ತುಂಬಿಸಿಕೊಂಡೆ. ಹಾಗೂ ಹೀಗೂ ಪ್ರಯಾಣ ಸೌಕರ್ಯಕ್ಕೆ ಬೇಕಾದ ವಸ್ತುಗಳನ್ನೆಲ್ಲಾ ಕಿಂಚಿತ್ತಿನಲ್ಲಿ ಸಂಗ್ರಹಿಸಿ, ಮರುದಿನ ಮೈಲಿನಲ್ಲಿ ಮದ್ರಾಸಿನ ಹಾದಿ ಹಿಡಿದೆ. ಕೈಯಲ್ಲಿ ಹಣವಿತ್ತು. ಎದೆಯಲ್ಲಿ ಧೈರ್ಯವಿತ್ತು. ಜೀವನಕ್ಕೇ ಆಧಾರಮೂರ್ತಿಯ ಆಶಾ ಬೆಂಬಲವೂ ಇದ್ದಿತು. ಹೇಳಿ ಕೇಳದುದಲ್ಲದೆ ಕಣ್ಣು ಕಂಡಿರದಂತಹ ಊರು. ನಂಟರಿಷ್ಟರಿಲ್ಲ; ಗೊತ್ತು ಗುರಿಯ ಪರಿವೆಯೇ ಅಲ್ಲಿಲ್ಲ. ಉಳಕೊಳ್ಳುವುದು ಎಲ್ಲಿ ಎಂಬ ಗೊತ್ತೂ ಇಲ್ಲ. ಆಶಾ ಜ್ಯೋತಿಯೊಂದು ತಣ್ಣನೆ ಬೀಸುವ ಗಾಳಿಯಲ್ಲಿ ಸರಸವಾಡುತ್ತಿತ್ತು. ಅದರಿಂದ ಅದಕ್ಕೆ .ಏಳಿಗೆಯೋ? ಅಧೋಗತಿಯೋ? ಎಂಬ ಅರಿವಿಲ್ಲ. ಶ್ರಮಪಟ್ಟು ಕಲಿತ ವಿದ್ಯೆಯು ಅಸಹಾಯಕಳ ಬಾಳಿಗೆ ಬೆಂಬಲವಾಗಿ ನಿಂತಿತ್ತು. ಅದೊಂದರ ಆಧಾರ ನನ್ನನ್ನು ಯಾವ ಕಾರ್ಯಕ್ಕೂ ಮುಂದೋಡಿಸುತ್ತಿತ್ತು. ಅಂತೂ ಮದರಾಸು ತಲುಪಿದೆ.

“ ಮದ್ರಾಸು ವಿಶಾಲ ಪಟ್ಟಣ. ಜನನಿಬಿಡವಾದ ಊರು—ಕೇರಿಗಳು. ಅಲ್ಲಿ ಓರ್ವನನ್ನು ಹುಡುಕುವುದೆಂದರೆ ಮಹತ್ತರ ಕಾರ್ಯ. ಅಪಾರ ಮಳಲ

ರಾಶಿಯಲ್ಲಿ ಬಿದ್ದುಬಿಟ್ಟ ಮಣಿರತ್ನವೊಂದನ್ನು ಹುಡುಕಿ ತೆಗೆಯುವಂತಹ ಸಾಹಸ. ನೆಲೆಯ ಅರಿವಿಲ್ಲ. ನಿಲಯದ ಪರಿಚಯವಿಲ್ಲ. ಗುರುತಿನ ಬಾಂಧವರಾರೂ ಇಲ್ಲ. ಹಾಗಿರುವಾಗ ನಾನರಿಸಿಕೊಂಡು ಬಂದ ರತ್ನವನ್ನೆಂತು ಹುಡುಕಲಿ? ರೈಲಿನಿಂದಿಳಿದು ಒಬ್ಬ ಕೂಲಿಯಾಳಿನೊಂದಿಗೆ 'ಒಂದು ಒಳ್ಳೆಯ ಹೋಟೆಲನ್ನು ತೋರಿಸಿಕೊಡು' ಎಂದು ಕೇಳಿದೆ. ಪಾಪದ ಜೀವಿ ನನ್ನಾಜ್ಞೆಯನ್ನು ಸ್ವೀಕರಿಸಿ ಯಾವುದೋ ಬೀದಿಯೊಂದರಲ್ಲಿಯ ಹೊಟೇಲೊಂದಕ್ಕೆ ಕರೆದೊಯ್ದನು. ಅವನುಪಕಾರಕ್ಕೆ ಕೈ ಬಿಸಿಮಾಡಿ ಅವನನ್ನು ಸಂತೋಷ ಪಡಿಸಿ ಕಳುಹಿಸಿ, ಭವ್ಯ ಭವನದೊಳಗೆ ನಡೆದೆ.

"ನಾನು ಇಲ್ಲಿನ ಮೆಡಿಕಲ್ ಕಾಲೇಜಿಗೆ ಸೇರಲು ಬಂದವಳು. ನಾನು ಕಾಲೇಜು ಪ್ರವೇಶವಾಗಿ ಹೋಸ್ಟೆಲಿನಲ್ಲಿ ಸೇರಿಕೊಳ್ಳುವ ತನಕ ನನಗೊಂದು ಉತ್ತಮ ರೂಮನ್ನೂ, ಉಳಕೊಳ್ಳಲು ಉತ್ತಮ ಸೌಕರ್ಯಗಳನ್ನೊದಗಿಸಿ ಕೊಡಬೇಕೆಂದು ಹೊಟೇಲು ಮಾಲಿಕರೊಡನೆ ಕೇಳಿದೆ. ಅಂತೆಯೇ ಒಂದು ಕೋಣೆಯನ್ನು ಗೊತ್ತುಮಾಡಿ, ನನ್ನ ಸೂಟ್ ಕೇಸನ್ನು ರೂಮಿನಲ್ಲಿ ಹಾಕಿ ಕೋಣೆಯ ಬೀಗದ ಕೈಯನ್ನು ಪಡಕೊಂಡೆ. ಪ್ರತಿನಿತ್ಯ ಬೆಳಗ್ಗೆ ಗಾಡಿ ಮಾಡಿಕೊಂಡು ಪ್ರತಿಯೊಂದು ಇಂಜಿನಿಯರಿಂಗ್ ಕಾಲೇಜು, ಮೆಡಿಕಲ್ ಕಾಲೇಜು ಮತ್ತು ಇನ್ನಿತರ ಕಾಲೇಜುಗಳನ್ನು ಸಂದರ್ಶಿಸುವುದೇ ನನ್ನ ಕೆಲಸವಾಯಿತು. ಎಲ್ಲಿ ಎಷ್ಟೆಷ್ಟು ಅಲೆದು ವಿಚಾರಿಸಿದರೂ ಶ್ರೀನಿವಾಸನ ಕುರುಹೇ ಪತ್ತೆಯಾಗಲಿಲ್ಲ. ಆಶೆ ನಿರಾಶೆಗಳು ನನ್ನನ್ನು ಹೆಜ್ಜೆಹೆಜ್ಜೆಗೂ ಬಂಧಿಸತೊಡಗಿದುವು. ಮತ್ತೂ ಆಸೆಯ ಕುಡಿ ಕೊನರುತ್ತಿತ್ತು. ಇಂದು, ....ನಾಳೆ.... ದೊರೆಯಬಹುದು ಎಂದು ಪುನಃ ಪುನಃ ಪ್ರಯತ್ನಿಸುತ್ತಿದ್ದೆ. ಆದರೆ........

"ಹಾಗೆ ಹುಡುಕಾಟದಲ್ಲೇ ಹದಿನೈದು ದಿನಗಳು ಕಳೆದುವು. ನಾನರಸಿ ಬಂದ ದೊರೆ ನನಗೆಲ್ಲಿಯೂ ದೊರೆಯಲಿಲ್ಲ. ಕೈಯಲ್ಲಿಯ ಹಣವೂ ಖರ್ಚಾಗುತ್ತಾ ಬಂತು. ದಿನಕ್ಕೆರಡು ಬಾರಿ ಟಾಂಗದ ಬಾಡಿಗೆ ತೆರುವಾಗ ದಿನ ನಿತ್ಯದ ಊಟ, ರೂಮ್ ಬಾಡಿಗೆ....ಹಣ ಉಳಿದೀತೆ? ಹಾದಿ ಬೀದಿಗಳ ಪರಿಚಯವಿಲ್ಲದುದರಿಂದ ಟ್ರಾಮು, ಸಿಟಿ ಬಸ್ಸ್‌ಗಳಲ್ಲಿ ಪ್ರಯಾಣಿಸಲು ಇಂಬಿಲ್ಲದೆ, ಟಾಂಗಾವಾಲರನ್ನೇ ಮರೆಹೋಗಬೇಕಾಗುತ್ತಿತ್ತು. ಅಂತೂ

ನನ್ನ ಆಶಾ ಚಿಗುರು ಕಮರಿ ಹೋಯಿತು. ಮುಂದೆ ಇನ್ನಾವುದಾದರೂ ಹಾದಿ ಹಿಡಿಯದಿದ್ದರೆ ಬದುಕಿನ ದಾರಿಯಾವುದು ? ಎಂಬ ಸಮಸ್ಯೆ ನನ್ನನ್ನು ತಿವಿದು ಕಾಡತೊಡಗಿತು. ಹಣವಿಲ್ಲದಿದ್ದರೆ ಹೊಟೇಲಲ್ಲಿ ಉಳ ಕೊಳ್ಳಲು ಬಿಡುವರೇ ? ಆದ್ದರಿಂದ ನನ್ನ ಬಾಳು ಬೀದಿ ಪಾಲಾಗುವ ಪಾಡಾಯಿತು. ಆದರೂ ಎದೆಯಲ್ಲಿದ್ದ ಧೈರ್ಯ, ಮಿದುಳಲ್ಲಿದ್ದ ವಿದ್ಯಾಪ್ರವೀಣತೆ ನನಗೆ ಉತ್ಸಾಹ ನೀಡುತ್ತಿತ್ತು.

"ನನ್ನ ಜೀವನ ಸಂಗ್ರಾಮದಲ್ಲಿ ಹೊಟ್ಟೆಯ ಪಾಡಿಗಾಗಿ ದುಡಿಯುವ ಕಾಲ ಒದಗಿತು. ಧೈರ್ಯದಿಂದ ಅದಕ್ಕೂ ಮುಂದಾದೆ. ತಕ್ಷಣ ನನಗೆ ಹೊಳೆದುದು ಅಧ್ಯಾಪಿಕಾವೃತ್ತಿ. ಎಲ್ಲಿಯಾದರೂ ಶಾಲೆಯನ್ನು ಸೇರಿಕೊಳ್ಳಬಹುದೇ ಎಂದು ಸುತ್ತಾಡಲಾರಂಭಿಸಿದೆ. ಒಂದೆರಡು ಕಡೆಗಳಲ್ಲಿ ವಿಚಾರಿಸಿದೆ. ದುರಾದೃಷ್ಟದಿಂದ ನಾನು ಬರುವಾಗ ನನ್ನ ಎಸ್. ಎಸ್. ಎಲ್. ಸಿ ಸರ್ಟಿಫಿಕೇಟ್ ಇತ್ಯಾದಿಗಳೆಲ್ಲವನ್ನೂ ಮನೆಯಲ್ಲಿಯೇ ಬಿಟ್ಟು ಬಂದಿದ್ದೆ. ನಾನು ನನ್ನ ದುಡುಕುತನದಿಂದ ಮೋಸ ಹೋದೆನು. ಆದರೂ ನನ್ನ ಪ್ರವೀಣತೆ ಕಂಡು ಎಲ್ಲಿಯಾದರೂ ಕೆಲಸ ದೊರೆತೀತೇ ಎಂದು ಪ್ರಯತ್ನಿಸಿದೆ. ಒಂದು ಶಾಲೆಯ ಹೆಡ್ ಮಿಸ್ಟ್ರೆಸ್ಸನ್ನು ಕಂಡು ನನ್ನ ಕಷ್ಟವನ್ನು ತಿಳಿಸಿ ಬೇಡಿಕೊಂಡೆ. ಅವರಿಗೆ ಬಹಳ ಕನಿಕರವುಂಟಾಗಿ ನನಗೆ ಒಂದನೆ, ಎರಡನೆ ಮತ್ತು ಮೂರನೆ ತರಗತಿಯ ಪಾಠ ತೆಗೆದುಕೊಳ್ಳುವಂತೆ ಹೇಳಿದರು. ಕೆಲಸ ದೊರೆತಾಗ ನಾನು ಗೆದ್ದೆನೆಂದು ಸಂತೋಷಗೊಂಡೆನು. ಅವರ ಉಪಕಾರಕ್ಕಾಗಿ ಮನಸ್ಸಾರೆ ವಂದಿಸಿದೆ. ಕ್ಲಾಸಿನಲ್ಲಿ ನಾನೇನೋ ಪಾಠ ಕಲಿಸುತ್ತಿದ್ದೆನು. ಆದರೆ ಅದು ಆ ಮಕ್ಕಳಿಗೆ ಸರಿಯಾಗಿ ಅರ್ಥವಾಗುತ್ತಿತ್ತೊ ಇಲ್ಲವೊ ಎಂದು ನನಗರಿತಿರಲಿಲ್ಲ. ಮಕ್ಕಳು, ಎಳೆ ಪ್ರಾಯದವರಾದುದರಿಂದ ಪಾಠದ ಮಧ್ಯದಲ್ಲೂ ಹೆಚ್ಚಾಗಿ ಏನೇನೋ ಗಲಾಟೆ ಮಾಡುತ್ತಿದ್ದರು. ನಾನೆಂದರೆ ಅವರಿಗೆ ಸ್ವಲ್ಪ ಸಲಿಗೆ ಜಾಸ್ತಿಯಾಗಿತ್ತು. ಪಾಠ ಏನೋ ಓದಿ ವಿವರಿಸುತ್ತಿದ್ದೆ. ನನ್ನ ಕ್ಲಾಸಿನಲ್ಲಾಗುತ್ತಿದ್ದ ಗಲಾಟೆ ಮಕ್ಕಳಿದ ನೆರೆಹೊರೆಯ ಕ್ಲಾಸುಗಳಿಗೆ ತೊಂದರೆ ಕೊಡುತ್ತಿತ್ತಂತೆ. ಆದ್ದರಿಂದ ಆ ಉಪಾಧ್ಯಾಯಿನಿಯರು ಉಪದ್ರದ ವಿಷಯವಾಗಿ ಮುಖ್ಯೋಪಾಧ್ಯಾಯಿನಿಗೆ ದೂರುಕೊಟ್ಟರು. ನನಗೆ ಒಂದೆರಡು ಬಾರಿ ಜಾಗ್ರತೆ ಹೇಳಿದರು. ನಾನು ಸ್ವಲ್ಪ ಗಡುಸಿನಿಂದ

ಕ್ಲಾಸನ್ನು ನೋಡಿಕೊಳ್ಳಲಾರಂಭಿಸಿದೆ. ಕೆಲ ಉಪಾಧ್ಯಾಯಿನಿಯರಿಗೆ, ಮುಖ್ಯೋಪಾಧ್ಯಾಯಿನಿ ನನ್ನ ಮೇಲೆ ತೋರುವ ಆದರಕ್ಕಾಗಿ ಕೋಪ ಉಮ್ಮಳಿಸಿತು. ಶಾಲೆ ಸೇರಿ ಒಂದು ತಿಂಗಳಾಗುವ ಮೊದಲೇ ಇಷ್ಟು ಮನ್ನಣೆ ಪಡೆದರೆ ಮತ್ತೆ ಆದರಿಂದ ತಮಗೆ ಹಾನಿಯಿದೆ ಎಂದು, ನನ್ನನ್ನು ಶಾಲೆ ಯಿಂದ ಹೊರತಳ್ಳಬೇಕೆಂದು ಅಲ್ಲಸಲ್ಲದ ಚಾಡಿಮಾತುಗಳನ್ನಾಡಿ ಮುಖ್ಯೋ ಪಾಧ್ಯಾಯಿನಿಯ ಕಿವಿಯರಳಿಸಿದರು. ನನಗೆ ಸರಿಯಾದ ಸಿಸ್ತಿನಿಂದ ಕ್ಲಾಸನ್ನು ಪಾಲಿಸಿಕೊಳ್ಳಲು ಸಾಧ್ಯವಿಲ್ಲದಿದ್ದರೆ ಶಾಲೆ ಬಿಡಬೇಕೆಂದು ಆಜ್ಞೆ ಯಾಯಿತು. ಮೊದಲೇ ಅಧ್ಯಾಪಿಕೆ ವೃತ್ತಿ ಎಂದರೆ ಅಸಹ್ಯಪಡುತ್ತಿದ್ದ ನನಗೆ ಈ ಸುಗ್ರೀವಾಜ್ಞೆ ಕೇಳಿ ಎಲ್ಲಿಲ್ಲದ ಕ್ರೋಧವುಂಟಾಯಿತು. ಹಿಂದು ಮುಂದು ನೋಡದೆ ಬೇಸರದಿಂದ ಕೆಲಸಕ್ಕೆ ರಾಜಿ ಕೊಟ್ಟು ಹೊರಟೆ. ಇದು ನನ್ನ ದುರಾದೃಷ್ಟವೆನ್ನಬೇಕು.

" ಒಂದೆರಡು ದಿನ ಯಾವ ಕೆಲಸವೂ ಇಲ್ಲದೆ ಹೊಟೇಲು ಕೊಠಡಿ ಯಲ್ಲೇ ಸುಮ್ಮನೆ ಕುಳಿತುಬಿಟ್ಟೆ. ತಲೆಯಲ್ಲಿ ಆಲೋಚನೆಗಳು ಒಂದರ ಹಿಂದೊಂದು ಸಾಲುಗಟ್ಟಿ ಬರುತ್ತಿದ್ದುವು. ಕಹಿ ಸಿಹಿಗಳ ಸವಿಯಿಂದ ಮನಸ್ಸೇ ಆಲ್ಲೋಲ ಕಲ್ಲೋಲಗೊಳ್ಳುತ್ತಿತ್ತು. ಯಾವುದಕ್ಕೂ ಪರರನ್ನು ದೂರಿ ಪ್ರಯೋಜನವಿದೆಯೇ ? ನಾನಿದ್ದ ಹೊಟೇಲಿಗೆ ಪ್ರತಿನಿತ್ಯವೂ ಕಾಫಿ ಕುಡಿಯಲು ಒಬ್ಬರು ವ್ಯಾಪಾರಸ್ಥರು ಬರುತ್ತಿದ್ದರು. ಸಾಧಾರಣ ಮೂವತ್ತು ವರ್ಷಗಳ ದೃಢಕಾಯ; ಸುಂದರ ಸುಶೀಲರು. ನಾನು, ಅತ್ತಿತ್ತ ಸುಳಿದಾಗಲೆಲ್ಲ ಅವರು ನನ್ನನ್ನೇ ದಿಟ್ಟಿಸಿ ನೋಡುತ್ತಿದ್ದರು. ನಾನ ವರನ್ನು ಲೆಕ್ಕಿಸದೆ ನನ್ನ ಪಾಡಿಗೆ ನಾನಿರುತ್ತಿದ್ದೆ. ಆದರೆ ಅವರಲ್ಲೊಂದು ಆಕರ್ಷಣೆ ಇದ್ದೇ ಇದ್ದಿತು. ಅವರು ಸುಳಿದು ಮಾಯವಾಗಬೇಕಿದ್ದರೆ ನನ್ನ ದೃಷ್ಟಿ ಒಮ್ಮೆಯಾದರೂ ಅವರನ್ನು ಅರಸುತ್ತಿತ್ತು. ಕೆಲವು ಸಂಜೆಗಳಲ್ಲಿ ಅವರು ನನ್ನ ರೂಮಿನ ಪಕ್ಕದಲ್ಲೇ ಅತ್ತಿತ್ತ ಸುಳಿದಾಡುತ್ತಿದ್ದರು. ನನ್ನ ದರ್ಶನದಿಂದ ಅವರಿಗಾನಂದವಾಗುತ್ತಿತ್ತೋ ಏನೋ ? ನನಗೆ ಮಾತ್ರ ಅವರ ಬಗ್ಗೆ ತಿರಸ್ಕಾರದ ಭಾವನೆಯಿತ್ತು. ಕಂಡೊಡನೆ ಮುಖ ತಿರುಹಿ, ಮುಂದೋ ಡುತ್ತಿದ್ದೆ. ಅಂದು ಮಾತ್ರ ನನ್ನ ತಾಳ್ಮೆ ಮೀರಿತ್ತು. ಮನಸ್ಸೆಂಬುದು ವಿಚಾರಗಳಿಂದ ಬಳಲಿ ಬೆಂಡಾಗಿತ್ತು. ವಿಪಿನಾಂತರಾಳದಲ್ಲಿ ದಿಕ್ಕುಗೆಟ್ಟು

ಹೋದ ಪ್ರಯಾಣಿಕನಂತಾಗಿತ್ತು ನನ್ನ ಅವಸ್ಥೆ. ಮುಂದಿನ ಹಾದಿ ಯಾವು ದೆಂದು ತೋರದಾಯಿತು. ಸುಲಕ್ಷಣದಿಂದಿರುವ ಆ ಗೌರವಿಯೊಂದಿಗೆ ವಿಚಾರಿಸಿಯಾದರೂ, ಸ್ವಲ್ಪ ಸಹಾಯ ಪಡೆದು, ನನ್ನ ಹಾಳಾದ ಬಾಳನ್ನು ಬೆಳಗಿಸೋಣವೆಂದು ನಿಶ್ಚಯಿಸಿದೆ. ಆದರೆ ಗೌರವಸ್ಥರಲ್ಲಿ ಒಮ್ಮಿಂದೊಮ್ಮೆ ಮಾತಾಡಲು ನನಗೆ ಅಂಜಿಕೆ. ಆದರೆ ಬಾಳಿನ ಕಷ್ಟವನ್ನು ಹೇಳಿಕೊಳ್ಳುವು ದರಲ್ಲಿ ಅಂಜಿಕೆಯೇನಿದೆ ಎಂಬ ವಿಚಾರದೊಂದಿಗೆ ಒಂದು ದಿನ ಅವರನ್ನು ಸಂಧಿಸಿದೆ. ನನ್ನ ಕಷ್ಟವನ್ನೆಲ್ಲಾ ತಿಳಿಸಿ, ನನಗೆ ಏನಾದರೊಂದು ಕೆಲಸವನ್ನು ಒದಗಿಸಿ ಕೊಡಬೇಕು. ನಾನು ಕಲಿತ ವಿಷಯ, ದುರಾದೃಷ್ಟದಿಂದ ದಿಕ್ಕಿಲ್ಲದೆ ಈ ಕಷ್ಟ ಒದಗಿತು. ನನಗೊಂದು ಉತ್ತಮ ಕೆಲಸ ಒದಗಿಸಿ ಕೊಟ್ಟರೆ ತಮ್ಮ ಉಪಕಾರಕ್ಕೆ ಚಿರಋಣಿ ಎಂದು ಬೇಡಿದೆ. ನಾನಾಗಿಯೇ ಅವ ರನ್ನು ಮುಂದಾಗಿ ಮಾತಾಡಿಸಿದ್ದುದು ಅವರಿಗೆ ಆನಂದವಾಯಿತು. ಸಂತೋ ಷದಿಂದ ಮುಗುಳುನಗೆ ಬೀರಿ, ನನ್ನ ಪರಿಚಯ, ಹುಟ್ಟಿದೂರು ಎಲ್ಲವನೂ ಸರಿಯಾಗಿ ಕೇಳಿಕೊಂಡರು. ಆದರೆ ನಾನು ಹೇಳಿದ್ದೆಲ್ಲ ಸುಳ್ಳೇ! ಅವ ರೊಬ್ಬರು ಅಲ್ಲಿನ ವ್ಯಾಪಾರಸ್ಥರು. ಮಂಗಳೂರಿನಿಂದ ಬೀಡಿ, ಹೊಗೆ ಸೊಪ್ಪು ಮೊದಲಾದ ಸಾಮಗ್ರಿಗಳನ್ನು ತರಿಸಿ, ರಖಂ ಆಗಿ ದಲಾಲಿ ಮಾಡಿ ಮಾರುವವರು. ಒಳ್ಳೆಯ ಹಣವಂತರು. ವ್ಯಾಪಾರ ದೃಷ್ಟಿಯಲ್ಲಿಯೂ ಒಳ್ಳೆ ನುರಿತ ಪ್ರವೀಣರು. ಮಂಗಳೂರಿನ ಹಲವಾರು ಸಾಮಗ್ರಿಗಳಿಗೂ ಅವರೇ ಮೂಲ ಏಜಂಟರು. ನನ್ನ ಅವಸ್ಥೆ ಕೇಳಿ ಅವರಿಗೂ ಕನಿಕರ ಉಂಟಾಯಿತು. ಸ್ವಲ್ಪ ಆಲೋಚಿಸುವಂತೆ ಮೌನವಾಗಿ, 'ಮತ್ತೆ, ಲೆಕ್ಕ ಪತ್ರ ನೋಡಿಕೊಳ್ಳುವೆಯಾ?' ಎಂದು ಕೇಳಿದರು. 'ಹೂಂ....ಎಲ್ಲಿಯಾ ದರೂ ನಿಮ್ಮ ಪರಿಚಯವಿರುವಲ್ಲಿ ಕೆಲಸ ಖಾಲಿಯಿದೆಯೇ' ಎಂದು ಕೇಳಿದೆ. ನಮ್ಮಲ್ಲೇ.... ಎಂದು ಅವರಲ್ಲೇ ಅವರ ವ್ಯಾಪಾರದ ಲೆಕ್ಕ ಬರೆದಿಡಲ ನನ್ನನ್ನು ಕರೆದೊಯ್ದರು. ಅದೊಂದು ಮಾಳಿಗೆಯ ಮನೆ. ಕೆಳಗೆ ಬಿಡಾರ. ಮನೆಯಲ್ಲಿ ಅವರು ಮತ್ತು ಅವರ ಪತ್ನಿ ಇಬ್ಬರೇ. ಮೇಲೆ ಅವರ ವ್ಯಾಪಾ ರದ ಅಂಗಡಿ. ಚೊಕ್ಕಟವಾದ ಕೋಣೆಯು. ಆಫೀಸೆಂದು ಕಾಣಲು ಬೇಕಾ ಗುವಷ್ಟು ಸಾಹಿತ್ಯ, ಕುರ್ಚಿ, ಮೇಜು, ಒಂದೆರಡು ಬೆಂಚುಗಳೂ ಇದ್ದುವು. ಕಪಾಟೊಂದರಲ್ಲಿ ಹಲವಾರು ಕಾಗದದ ಕಟ್ಟುಗಳು, ಕೆಲವು ಫೈಲುಗಳು,

ಕೆಲವು ಫೈಲುಗಳು. ಬಳಿಯ ಮೂಟೆಯಲ್ಲಿ ತುಂಬಿಸಿಟ್ಟ ಕೆಲವು ಸಾಮಾನು ಗಳು. ಮೊದಲ ದಿನವೇ ನನ್ನ ಲೆಕ್ಕದ ಪರೀಕ್ಷೆಯಾಯಿತು. ಅವರ ಲೆಕ್ಕವನ್ನು ಕಣ್ಣು ಮುಚ್ಚಿ ಬಿಡಿಸುವುದರೊಳಗೆ ಕೂಡಿಸಿ ಅಂದಿನ ಲೆಕ್ಕವನ್ನು ಬರೆದುಕೊಟ್ಟೆ. ಮತ್ತೆ ಕೆಲವು ಪುಸ್ತಕಗಳನ್ನು ಕೊಟ್ಟು ಅದರಲ್ಲಿ ಬಾಕಿ ಯಿರುವವರದ್ದೆಲ್ಲಾ ಮೊಬಲಗನ್ನು ಒಟ್ಟು ಕೂಡಿಸಲು ಹೇಳಿದರು. ಕೆಲವೆಡೆ ತಿಳಿಯದೆ ಇದ್ದುದನ್ನು ಅವರೊಡನೆ ವಿಚಾರಿಸಿ ಆ ಲೆಕ್ಕವನ್ನೂ ಸರಿಯಾಗಿ ಮಾಡಿಕೊಟ್ಟೆ.

"ನನ್ನ ಕೆಲಸಗಳನ್ನು ಕಂಡು ಅವರಿಗೆ ಆನಂದವಾಯಿತು. ನನಗೆ ಸಂಬಳದ ನಿರ್ಣಯವೇನೂ ಆಗಿರಲಿಲ್ಲ. ಅವರೂ ಆ ಗೋಜಿಗೆ ಹೋಗಿರ ಲಿಲ್ಲ. ನೆಲೆಸೇರುವ ಮುಂದೆ ಸಂಬಳ ಕೇಳಬೇಕೆ? ಎಂದು ನನ್ನಲ್ಲೇ ಲಘುನಾಚಿಕೆ ತಲೆದೋರಿತ್ತು. ಯಾಕೆಂದರೆ ಅವರೂ ಗೌರವಸ್ಥ ಗೃಹಸ್ಥ ರಲ್ಲವೆ ? ಕೆಲಸಕ್ಕೆ ಸೇರಿದ ನಾನು ಕೆಲಸವಾದ ನಂತರವೂ ಹೊಟೇಲಿನ ಲ್ಲಿಯೇ ಇರುವುದೆಂದು ನಿರ್ಧರಿಸಿದ್ದೆ. ಹಾಗಿದ್ದರೇನೇ ನನ್ನ ಮನಸ್ಸಿಗೆ ಸಮಾ ಧಾನ. ಆದರೆ........ಮೂರನೆಯ ದಿನ ನನ್ನ ಸಾಮಾನುಗಳನ್ನೆಲ್ಲ ಅವರ ಮನೆಗೆ ಸಾಗಿಸಬೇಕೆಂದು ಕೇಳಿಕೊಂಡರು. ಮನೆಯಲ್ಲಿ ಎಷ್ಟೋ ಸ್ಥಳ ವಿರುವಾಗ ಹೊಟೇಲಿಗೇಕೆ ಸುಮ್ಮನೆ ಹಣ ತೆರಬೇಕು. ಇಲ್ಲಿಯ ಕೊಠಡಿ ಯೊಂದರಲ್ಲಿ ಇದ್ದುಬಿಡು ಎಂದು ಹೇಳಿ ಆಳನ್ನು ಕರೆದರು. ನಾನು ಬೇಡ ವೆಂದರೂ ಅವರು ಕೇಳಲಿಲ್ಲ. ನನ್ನ ಮೇಲೆ ಅವರು ತೋರಿದ ಅಪಾರ ಕನಿ ಕರ ( ? ) ನನ್ನನ್ನು ಮರುಳು ಮಾಡಿತು. ನಾನೆಂದರೆ ಅವರಿಗೆ ತುಂಬಾ ಅಭಿಮಾನವಿತ್ತು. ಮನೆಯಲ್ಲಿ ಅವರ ಮಡದಿಗೆ ನನ್ನ ಪರಿಚಯ ಮಾಡಿ ಕೊಟ್ಟರು. ಆದರೆ ಆಕೆಯ ಸ್ನೇಹ ಸಂಪಾದಿಸಲು ನನಗೆ ಸ್ವಲ್ಪ ಕಷ್ಟ ವಾದರೂ ಮತ್ತೆ ನನ್ನ ನಾಲಿಗೆಯ ಚಾತುರ್ಯದಿಂದ ಅವರನ್ನು ಒಲಿಸಿ ಕೊಂಡೆ. ಕ್ರಮೇಣ ನನ್ನನ್ನು ಅವರ ಮನೆಯುವರಂತೆ ಸಲಿಗೆಯಿಂದ ಒಲಿದು ಬಿಟ್ಟರವರು. ಎಷ್ಟೆಂದರೂ ಸ್ತ್ರೀಯಲ್ಲವೆ ? ಒಂದು ತರದ ಓರೆ ಕಣ್ಣು ನನ್ನ ಮೇಲಿದ್ದರೂ....ನಾನು ನನ್ನ ಕೆಲಸವಾದೊಡನೆ ನನ್ನ ಕೋಣೆ ಸೇರಿ ಬಿಡುತ್ತಿದ್ದೆ. ಆದರೆ ನನ್ನ ಮನಸ್ಸು....ದಿನವಿಡಿ ಸರ್ವ ಚಟುವಟಿಕೆಯಲ್ಲಿ ಭಾಗ ವಹಿಸುತ್ತಾ, ಪ್ರತಿಯೊಂದು ಆಟದಲ್ಲಿಯೂ ಮುಂದಾಳಾಗಿ ಓಡೋ

ಡುತ್ತಾ ಮುಂದುವರಿಯುತ್ತಿದ್ದ ನನಗೆ ಕುಳಿತುಕೊಳ್ಳುವುದೆಂದರೆ ಬೇಸರ ವಾಗುತ್ತಿತ್ತು. ಅದೇ ಮನೆಯ ಅನ್ನವನ್ನು ತಿನ್ನುವುದರಿಂದ ಅವರ ಮನೆ ಕೆಲಸದಲ್ಲಿ ಭಾಗ ವಹಿಸಿ, ಅವರ ಕೈಗೂ ಸಹಾಯಕಳಾಗಿ ಮುಂದಾದರೆ ಅವರಿಗೂ ಸ್ವಲ್ಪ ಬಿಡುವೇ ದೊರೆತಂತಾದೀತು ಎಂಬ ಭಾವನೆ ಮೂಡಿತು. ಅವರ ಅನ್ನ ತಿನ್ನುವಾಗ ಅವರಿಗೆ ಸಹಾಯ ಮಾಡುವುದೂ ನನ್ನ ಕರ್ತವ್ಯ ವಲ್ಲವೇ ? ಆಲಸ್ಯದಿಂದ ಮಹಾರಾಣಿಯಂತೆ ಬಿದ್ದುಕೊಂಡಿರುವುದರ ಬದಲು ದುಡಿಯುತ್ತಿರುವ ಮನೆಯೊಡತಿಯೊಂದಿಗೆ ಸಹಕರಿಸಿದರೇನಂತೆ ಎಂದು ನನ್ನ ಮನಸ್ಸು ಒಡಂಬಡಿಸಿತು. ಆದ್ದರಿಂದ ನನ್ನ ಆಫೀಸಿನ ಕೆಲಸ ಮುಗಿದೊಡನೆ 'ಅಮ್ಮ'ನಿಗೆ ಕೆಲಸಕ್ಕೆ ನೆರವಾಗಿ ಅವರ ಎಲ್ಲ ಕೆಲಸಗಳಲ್ಲೂ ನಾನು ಸಹ ಭಾಗಿಯಾದೆ. ಇದರಿಂದ ಅವರ ಆದರ ನನ್ನ ಮೇಲೆ ಹರಿಯಿತು. ನಾವೆ ಲ್ಲರೂ ಒಂದು ಮನೆಯವರಂತೆ ಆದೆವು. ಮತ್ತೆ....ಊಟ, ಮಾತುಕತೆಗಳೂ ಒಟ್ಟಿಗೆ ನಡೆಯುತ್ತಿತ್ತು. ಪರರೆಂಬ ಭೇದ ಅಲ್ಲಿರಲಿಲ್ಲ. ನಾನೂ ಅವರ ಮನೆಯವಳೇ ಆಗಿಬಿಟ್ಟಿದ್ದೆ.

"ಆಗ ಮನೆಯ ಅಮ್ಮ ಚೊಚ್ಚಲು ಬಸುರಿ. ಶ್ರೀಮಂತ ಮನೆ ತನದ ಆಕೆಯ ಚೊಚ್ಚಲ ಸಂಭ್ರಮ ಹೇಳಬೇಕೇ ? ಆರು ತಿಂಗಳು ತುಂಬಿದೊಡನೆ ತಾಯಿ ಮನೆಗೆ ಹೊರಟು ನಿಂತರು. ಪ್ರತಿನಿತ್ಯ ತವರು ಮನೆಯ ಸುದ್ದಿಯೇ....ಆನಂದದಿಂದ ಹುಟ್ಟುವ ಮಗನ ಚರ್ಚೆ....ಅಂತೂ ಹೊರಟು ನಿಂತ 'ತಾಯಿ' ಆರು ತಿಂಗಳು ತುಂಬುವ ಮೊದಲೇ ತವರು ಮನೆ ಸೇರಿದರು. ಆದರೆ ಅವರ ವಕ್ರದೃಷ್ಟಿ ನನ್ನ ಮೇಲಿರಿಸಿ ಹೋಗಿ ದ್ದರು. ಬೆಳೆದ ಹುಡುಗಿ, ನೋಡಲು ಸೌಂದರ್ಯವತಿ, ಎಲ್ಲಿ ತನ್ನ ಪತಿಯ ಪ್ರೇಮಕಟಾಕ್ಷಕ್ಕೂ ಬಲಿಯಾಗಿ ತನಗೆ ಅಡ್ಡ ನಿಂತರೆ ಎಂಬ ಭಾವನೆ ಅವ ರನ್ನು ತಳಮಳಿಸಿರಬೇಕು. ಹಾಗಿತ್ತು ಅವರ ಮೋರೆ. ಅಂತೂ ಬಾಯಿ ಯಿಂದಾಡುವ ಧೈರ್ಯ ಅವರಿಗೂ ಇದ್ದಿಲ್ಲ. ಅಮ್ಮ ತೆರಳಿದ ನಂತರ ಗ್ರಹಕಾರ್ಯದ ಭಾರವೆಲ್ಲ ನನ್ನ ತಲೆಯ ಮೇಲೆ ಬಿದ್ದುವು. ವ್ಯಾಪಾರ ವಹಿವಾಟು ಅಷ್ಟೊಂದು ವಿಶೇಷವಿಲ್ಲದುದರಿಂದ ನನಗೂ ಹೆಚ್ಚು ಬಿಡುವು ದೊರೆಯಿತು. ರಾಯರು ಕೆಲಸಕ್ಕೆ ಒಂದು ಜನವನ್ನು ನೇಮಿಸುವೆನೆಂದರೂ ಬೇಡವೆಂದೆ. ಸಮಯಕ್ಕೆ ಸರಿಯಾಗಿ ಮನೆಕೆಲಸವನ್ನು ತೀರಿಸಿ, ಮತ್ತೆ

ವ್ಯಾಪಾರದತ್ತ ಸಾಗುತ್ತಿದ್ದೆ. ಆದರೆ ಅವರಿಗೆ ನನ್ನಿಂದೆರಡೂ ಕೆಲಸ ಮಾಡಿ ಸುವ ಮನಸ್ಸಿರಲಿಲ್ಲ. ನೀನು ಮನೆಕೆಲಸವನ್ನೇ ನೋಡುತ್ತಾ, ನನಗೆ ಹೊತ್ತಿಗೆ ಸರಿಯಾಗಿ ಅನ್ನವಿಕ್ಕಿದರೆ ಸಾಕೆಂದು ಅನ್ನುತ್ತಿದ್ದರು. ನನ್ನನ್ನು ಎರಡು ಕಡೆಯಲ್ಲಿಯೂ ದುಡಿಸಲು ಮನಸ್ಸೇ ಇರಲಿಲ್ಲ ಅವರಿಗೆ. ಮತ್ತೆ ಕೆಲ ಸಮಯ ವ್ಯಾಪಾರ ಕಮ್ಮಿಯಾಯಿತು. ಆಗ ನನಗೆ ಸಂಪೂರ್ಣ ವಿರಾಮ. ಬರಿ ಅಡಿಗೆ ಕೆಲಸ ಮಾತ್ರ ನನ್ನ ಪಾಲಿನದಾಯಿತು. ನನಗೆ ಹೆಚ್ಚು ಆಯಾಸವಾಗುತ್ತದೆ. ಆದುದರಿಂದ ನೀನು ಮೇಲೆ ಬರುವುದೇ ಬೇಡವೆಂದರು. ಆದರೆ ನಾನು ಮಾತ್ರ ಅವರ ಋಣಕ್ಕೆ ಭಾಗಿಯಾಗದವ ಳಂತೆ ಎರಡರಲ್ಲೂ ಒದ್ದಾಡಿಕೊಂಡೇ ಇದ್ದೆ. ನನ್ನ ಗೃಹೋಪಚಾರವು ಅವರಿಗೆ ಒಗ್ಗಿತ್ತು. ನನಗೆ ಅವರ ನಡತೆಯಲ್ಲಿ ಒಮ್ಮೊಮ್ಮೆ ಸ್ವಲ್ಪ ಭಯ ವಾದರೂ ಅವರ ಉದಾರ ಹೃದಯಕ್ಕೆ ಮೆಚ್ಚುಗೆ ಇದ್ದಿತು. ಮೊದಮೊದಲು ಊಟದ ಸಮಯದಲ್ಲಿ ಏನೊಂದೂ ನುಡಿಯದೆ ತಿಂದುಹೋಗುತ್ತಿದ್ದರು. ನನ್ನ ಅಡಿಗೆಯ ವಿಚಾರವೂ ಏನಿಲ್ಲ, ಹೇಗಾಗಿದೆ ಎಂದರೆ ಮಾತ್ರ 'ಒಳ್ಳೆ ಯದೇ ಆಗಿದೆ' ಎಂದು ಹೇಳಿ ಊಟ ಮುಗಿಸುತ್ತಿದ್ದರು. ನಾನು ಕೇಳಿದ ಪ್ರಶ್ನೆಗೆ ಉತ್ತರ ಮಾತ್ರ. ತಿಂಡಿ ತಿನಸುಗಳ ವಿಚಾರವೂ ಅಷ್ಟೇ.

"ಬರಬರುತ್ತ ನನ್ನ ಪಾಕ ಕಾರ್ಯವನ್ನು ಹೊಗಳಲಾರಂಭಿಸಿದರು. ಏನೇ ಸೊಟ್ಟ ತಿಂಡಿಯಾದರೂ ಅದರ ವಿಚಾರ ಬಣ್ಣ ಬಳಿದು ವರ್ಣಿಸಿ, ನನ್ನನ್ನು ಹೊಗಳಿ ನಗಿಸುತ್ತಿದ್ದರು. ನನ್ನ ಪಾಕವೆಂದರೆ ನಳಪಾಕವಂತೆ! ಅವರ ಮಡದಿಯ ಅಡಿಗೆಗಿಂತಲೂ ನನ್ನ ಅಡಿಗೆ ಉತ್ತಮ ರುಚಿಕರವಾಗಿದ್ದು ನಿರ್ಮಲವಾಗಿದೆಯಂತೆ! ಅಂತೂ ಅವರು ನನ್ನ ಕಾರ್ಯಗಳಲ್ಲಿ ಮೆಚ್ಚಿ ನನ್ನನ್ನೂ ಮೆಚ್ಚಿಸುತ್ತಿದ್ದರು. ಸಂಜೆ ಪೇಟೆಯಿಂದ ಬರುವಾಗ ವಾಡಿಕೆ ಯಂತೆ ಏನಾದರೂ ಹಣ್ಣುಹಂಪಲುಗಳನ್ನು ತರತೊಡಗಿದರು. ಅವರೂ ನಾನೂ ಒಟ್ಟಿಗೆ ಅದನ್ನು ತಿಂದು ಏನಾದರೂ ಹರಟೆ ಹೊಡೆದು ಸಂತಸ ಗೊಂಡು ನಕ್ಕು ನಲಿದಾಡುತ್ತಿದ್ದೆವು. ಅವರು ಬಹಳ ಉದಾರಿ, ಹೃದಯದ ಒಲುವೆಂದರೆ ಪುಟಕ್ಕಿಟ್ಟ ಚಿನ್ನದಂತಿತ್ತು. ನಾನೆಂದರೆ ಅವರಿಗೆ ಅವರ ಪತ್ನಿ ಗಿಂತಲೂ ಪ್ರಿಯಳಾಗಿದ್ದೆ. ಅಂತೆಯೇ ಕಾಣುತ್ತಲೂ ಇದ್ದರು..

"ಕಂದಿ ನಿರಾಶೆಯಿಂದ ಒಣಗಿ ಹೋದ ನನ್ನ ಜೀವನ, ಅವರ

ಪ್ರೀತ್ಯಾದರಗಳಿಂದ ಚಿಗುರೊಡೆದ ವೃಕ್ಷದಂತೆ ನವಸ್ಫೂರ್ತಿಗೊಂಡಿತು. ಇದ ಕ್ಕಾಗಿ ನಾನವರಿಗೆಂದಿಗೂ ಋಣಿ. ಒಂದು ದಿನ ಸಂಜೆ ತಿರುಗಾಡಿಕೊಂಡು ಬರಲು ಹೋದ ರಾಯರು ಹಿಂತಿರುಗುವಾಗ ಹರ್ಷವದನರಾಗಿ ಕೈಯ್ಯ ಲ್ಲೊಂದು ಕಿರುಗಂಟನ್ನು ತಂದರು. ಚಾವಡಿ ಮೇಜಿನ ಮೇಲೆ ಗಂಟಿಟ್ಟು ಒಂದೊಂದೇ ವಸ್ತುಗಳನ್ನು ತೆಗೆಯಲಾರಂಭಿಸಿದರು. ಮೊದಲು ಒಂದು ಚೆಂಡುಮಲ್ಲಿಗೆ ಹೂ—ಬಾಳೆಲೆಯ ಹೊದಿಕೆಯಿಂದ ಇಣಿಕಿ ನೋಡುತ್ತಿತ್ತು. ಮತ್ತೊಂದು ಕಾಗದದ ಕಟ್ಟು—ಅದರಲ್ಲಿ ಹರಿದ ಕಾಗದದ ಎಡೆಯಿಂದ ಸಿಲ್ಕು ಸೀರೆ ಇಣಿಕಿ ನೋಡುತ್ತಿತ್ತು. ನಂತರ ದಿನನಿತ್ಯ ತರುವ ಹಣ್ಣು ಗಳು. ಹಣ್ಣುಗಳನ್ನೆಲ್ಲಾ ತೆಗೆದು ಇಟ್ಟು ನನ್ನನ್ನು ಬರಹೇಳಿದರು ನಡು ಕೋಣೆಯಲ್ಲಿ ಕುಳಿತು ಹರಿದ ಸೀರೆಯನ್ನು ಹೊಲೆಯುತ್ತಿದ್ದ ನನಗೆ ಅವರ ಕರೆ—ಅವರು ತಂದ ವಸ್ತುಗಳೆಲ್ಲ ಆಶ್ಚರ್ಯವನ್ನೇ ತಂದೊಡ್ಡುತ್ತಿತ್ತು. ಅವ ರಾಜ್ಞೆಯನ್ನು ಕೂಡಲೇ ಶಿರಸಾವಹಿಸಿ ಅವರಂದಂತೆ ಅರೆನಿಮಿಷದಲ್ಲಿಯೇ ಹಣ್ಣುಗಳನ್ನು ಒಳಗಿಟ್ಟು ಬಂದೆ. ತಾರಾ....ನೀನು ಇದನ್ನು ಉಟ್ಟುಕೋ, ನಿನ್ನ ಸೌಂದರ್ಯ ರಾಸಿಗೆ ಇನ್ನಷ್ಟೂ ಪ್ರಭೆಯನ್ನು ಕೊಟ್ಟೀತು." ಎಂದು ತಡೆತಡೆಯಾಗಿ ನುಡಿಯುತ್ತಾ ಸೀರೆಯ ಕಟ್ಟನ್ನೂ, ಹೂವಿನ ಚೆಂಡನ್ನೂ ನನ್ನ ಕೈಗಿತ್ತರು. ನಿರುಪಾಯಳಾಗಿ ನಾನು ಅದನ್ನೆತ್ತಿಕೊಂಡೆ. ನನಗಾಗ ಉಭಯ ಸಂಕಟವಾಗಿತ್ತು. ಅವರ ಅಂದಿನ ಆ ನಾವಿನ್ಯತೆಯನ್ನು ಕಂಡಾಗ ಅವರೇಕೆ ಹಾಗೆ ಮಾಡುವರೆಂದು ನನಗರ್ಥವಾಗದಿರಲಿಲ್ಲ. ಆದರೆ....ನನ್ನ ಧರ್ಮ....ಎಲ್ಲವೂ ಸಿಮಿಷಾರ್ಧದ ದಿಗ್ಭ್ರಮೆ. ಅನ್ನದಾತನ ಆಜ್ಞೆಯನ್ನು ಶಿರಸಾವಹಿಸದಿದ್ದರೆ ನಾನು ಅಕ್ಷಮ್ಯ ಅಪರಾಧಿನಿಯಾಗಬಹುದೆಂದು ತೋರಿತು. ಮತ್ತೆ ನನಗಾವ ಪರಿಹಾರವೂ ತೋರಲಿಲ್ಲ. ಅವರ ಆಜ್ಞೆ ಯನ್ನೆ ಶಿರಸಾವಹಿಸಿ ಅವರಿಂದಲೇ ಆ ಕಾಣಿಕೆಗಳನ್ನು ಸ್ವೀಕರಿಸಿ, ಅಲಂಕೃತ ಳಾದೆ. 'ಕೈಹಿಡಿದ ಗಂಡನಿಂದೋಡಿ ಬಂದಾದ ನಂತರ, ಇನ್ನು ಆಶ್ರಯ ವಿತ್ತು ಆದರಿಸಿ ಸತ್ಕರಿಸಿದವನೇ ಗಂಡ!' ಎಂಬ ಹೊಸ ಭ್ರಮೆಯು ನನಗೆ ಉತ್ತೇಜನವಿತ್ತಿತು. ಆಗ ಇನ್ನಾರೂ ನನಗೆ ಹೊಣೆಯಾಗಿದ್ದಂತೆ ತೋರ ಲಿಲ್ಲ. ನನ್ನ ಅಲಂಕೃತ ಸೌಂದರ್ಯವನ್ನು ಕಂಡ ರಾಯರು ಮನಮೆಚ್ಚಿ, ಮುಗ್ಧತೆಯಿಂದ ಭ್ರಾಂತರಾಗಿ, ಆನಂದ ವಿಕಾರವನ್ನು ತಾಳಲಾರದೆ ಕೈಚಾಚಿ

ಮುನ್ನುಗ್ಗಿ ಬಂದು ಅಪ್ಪಿ ಮುದ್ದಿಕ್ಕಬೇಕೆನ್ನುವಷ್ಟು ಹುಚ್ಚರಾದರು. ಆದರೆ, ....ಅವರ ಕೈಗಳೇನೋ ಮುಂದೆ ಚಾಚಿಕೊಂಡು, ಇಚ್ಛಾಪೂರಕ ನೋಟ ವೊಂದು ನನ್ನನ್ನು ಸ್ವಾಗತಿಸುತ್ತಿತ್ತಲ್ಲದೆ, ಕಾಲ್ದೆಗೆದು ಮುಂದೆ ಬರಲು ಧೈರ್ಯವಿರಲಿಲ್ಲ. ಬಹುಶಃ ನಾನು ಪರಸ್ತ್ರೀಯೆಂಬ ವಿವೇಕವು ಅವರಿ ಗಾಗ ಹೊಳೆದಿರಬೇಕು. ನನಗೆ ಮಾತ್ರ ಅವರ ಆ ಆಕಾಂಕ್ಷೆಯ ನೋಟ ವನ್ನು ತಾಳಲಾಗಲಿಲ್ಲ. ಬೀದಿ ಪಾಲಾಗಿ ಹೋಗುತ್ತಿದ್ದ ನನ್ನ ಜೀವನಕ್ಕೆ ಆಧಾರಸ್ತಂಭರಂತಿದ್ದು ಆಶ್ರಯವಿತ್ತಿರುವ ಉದಾರಿಯ ಮನೋತೃಪ್ತಿ ಯನ್ನು ಕೈಗೂಡಿಸಲಾರದೆ ಹೋದೆನೇ ? ಆದರೆ ಅದು ಸರಿಯಲ್ಲ ಎಂದು ಮನಸ್ಸು ಮರುಧ್ವನಿಗೈಯುತ್ತಿತ್ತು. ತಕ್ಷಣ, ಅದಾವ ಪರಿವರ್ತನೆಯೋ ನನಗೆ ತಿಳಿಯದು....ನಾನವರನ್ನು ಅಪ್ಪಿಕೊಂಡಿದ್ದೆ. ಕೊರಳಲ್ಲಿ ಕೈಹಾಕಿ ಜೋತು ಬಿದ್ದು ಅವರಿಗೆ ಮುತ್ತಿಟ್ಟೆ. ಅವರ ನಿಡಿ ತೋಳುಗಳೂ ನನ್ನನ್ನು ಬಂಧಿಸಿದವು. ನಾನವರ ತೆಕ್ಕೆಯಲ್ಲೆಷ್ಟು ಸಮಯವಿದ್ದೆನೆಂದು ಅರಿಯೆ. ಅಂದವರ ಮನಸ್ಸು ಶಾಂತಗೊಂಡಿತು. ಮನದಭಿಲಾಷೆ ಪೂರ್ತಿಯಾಯಿತು. ಅಂದಿನಿಂದ ಎಂದಿಗಿಂತಲೂ ಹೆಚ್ಚಿನ ಸಹಾನುಭೂತಿಯಿಂದ ನನ್ನನ್ನವರು ಕಂಡರು. ನಾನೂ ಅವರ ಅಭಿಲಾಷೆಗಳಿಗೆ ಎರಡೆನಿಸದೆ ನನ್ನನ್ನೂ ನನ್ನ ಸರ್ವಸ್ವವನ್ನೂ ಅರ್ಪಿಸಿದೆ. ನನ್ನಿಡೀ ದೇಹವನ್ನು ಅವರಿಚ್ಛೆಯಂತೆ ದಾನ ಮಾಡಿದೆ. ಅವರ ಸಕಲ ಸೇವೆಗಳಲ್ಲೂ ನಿರತಳಾಗಿ ಆನಂದಕ್ಕೆ ಕೊರತೆಬಾರ ದಂತೆ, ಅವರ ತೃಪ್ತಿಯೇ ನನ್ನ ಸುಖವೆಂದು ಬಗೆದೆ.

"ನನ್ನ ಜೀವನ....ಆ ಕನಕ ಪ್ರಪಂಚದಲ್ಲಿ ಅನುಭವಿಸದ ಸುಖಗಳ ನ್ನೆಲ್ಲ ಸವಿಯಿತು. ರಾಯರ ಉದಾರತೆ ನನ್ನ ಕನಸಿನ ಸುಖವನ್ನು ನಡೆಸಿ ಕೊಟ್ಟಿತು. ಶ್ರೀನಿವಾಸನೊಡನಾಟದಲ್ಲಿ ನಾನು ಕಟ್ಟಿಕೊಂಡಿದ್ದ ಗಾಳಿ ಗೋಪುರದ ಸ್ಥಿರರೂಪವನ್ನವರು ತೋರಿಸಿಕೊಟ್ಟರು. ಸರಸ ಸಲ್ಲಾಪಗ ಳಲ್ಲೂ, ಪ್ರಣಯ ವಿಹಾರಗಳಲ್ಲೂ, ಮನರಂಜಕ ವಿಚಾರಗಳಲ್ಲೂ ಕೊರತೆ ಯಿಲ್ಲದೆ ಮುನ್ನಡೆದೆವು. ವ್ಯಾಪಾರ ವ್ಯವಹಾರಗಳಲ್ಲಿ ಯಶಸ್ಸನ್ನೇ ಸಂಪಾದಿ ಸಿದರು. ಅವರ ಸಹವಾಸದಿಂದ ನನ್ನ ಮನಸ್ಸಿಗೆ—ಒಂದೆಡೆ ತೃಪ್ತಿ........ ಆನಂದ—ಮತ್ತೊಂದೆಡೆ ಬೇಸರ—ನನ್ನ ನಡತೆಗಾಗಿ ಮರುಗುವಂತಾಯಿತು. ಶ್ರೀನಿವಾಸನಿಂದ ಯಾವ ಸುಖಕ್ಕೆ ಲೋಪ ಬಂದಿತ್ತೋ ಅದನ್ನೆಲ್ಲಾ ಈ

ರಾಯರಿಂದ ಪಡೆದೆ. ಆದರೂ ನಾನು ಅರಸಲು ಹೊರಟ ಸುಖದ ಮೂರ್ತಿ ಯನ್ನು ಮಾತ್ರ ಪಡೆಯದಾದೆ. ಅಂತೂ ನಾನು ಅಂದು ಕಂಡ ಸುಖಗಳಿ ಗಾಗಿ ನಾನವರಿಗೆ ಶರಣು.

## ೫

ಶಾಂಭವಿಯ ಮನೆ ಹಾದಿ ಹಿಡಿದು ಸಜ್ಜಿತ ವಸ್ತ್ರಭೂಷಣರಾದ ಗೃಹಸ್ಥ ರೋರ್ವರು ಬರುತ್ತಿದ್ದರು. ಗೇಟು ತೆರದ ಶಬ್ದ ಕೇಳಿ ಗೆಳತಿಯರ ಮಾತು ಕತೆ ತಾನಾಗಿಯೇ ನಿಂತಿತು. ಕಲ್ಲು ಮಾತ್ರ ತನ್ನ ಕರ್ತವ್ಯದಲ್ಲೇ ನಿರತ ವಾಗಿತ್ತು. ಮುಂದೆ ಬರುತ್ತಿದ್ದ ನಡುಪ್ರಾಯದ ಗೃಹಸ್ಥರು ಮನೆ ಮೆಟ್ಟಿಲೇ ರುತ್ತಾ "ರಾಯರಿದ್ದಾರೇನಮ್ಮಾ" ಎಂದು ಪ್ರಶ್ನಿಸಿದರು. ಕಲ್ಲು ಬಿಟ್ಟೆದ್ದು ಹೊಸ್ತಿಲ ಬಳಿ ಸಾರಿ ನಿಂತು ಶಾಂಭವಿ: "ಇಲ್ಲ.... ಅವರು 'ಕ್ಯಾಂಪ್'ಗೆ ಹೋಗಿದ್ದಾರೆ. ಏನು ಕೆಲಸವಿತ್ತೆ?" ಎಂದು ಮರುಪ್ರಶ್ನೆಯನ್ನಿತ್ತರು.

ಮೆಟ್ಟಲಲ್ಲೇ ನಿಂತುಬಿಟ್ಟ ವ್ಯಕ್ತಿ: "ಸ್ವಲ್ಪ ಮಾತಾಡುವುದಿತ್ತು. ಯಾವಾಗ ಬಂದಾರು?" ಎಂದರು.

"ನಾಳೆ.... ಎಂದಿದ್ದಾರೆ."

"ಸರಿ, ನಾನು ನಾಳೆ ಬರುತ್ತೇನೆ. ಅವರೊಡನೆ ಮಾತನಾಡುವ ಕೆಲಸವಿದೆ. ಬರುತ್ತೇನೆ" ಎಂದು ಹಿಂತಿರುಗಿ ನಡೆದರು.

ಶಾಂಭವಿ ಅವರ ಹಿನ್ನಡೆಯನ್ನು ಕಂಡು ಗೆಳತಿ ತಾರಳೆಡೆಗೆ ಬಂದು: "ಯಾರೋ....ಅವರೊಡನೆ ಮಾತಾಡುವ ಕೆಲಸವಂತೆ. ಬಹುಶಃ ಗುಪ್ತವ್ಯವ ಹಾರವಾಗಿರಬೇಕು." ಎಂದಂದುಕೊಂಡರು.

"ನಿಮಗವರ ಪರಿಚಯವಿಲ್ಲವೇ?" ಎಂದಳು ತಾರ.

"ಇಲ್ಲಮ್ಮ........ ಯಾರೋ ಹೊಸಬರವರು. ಈವರೆಗೆ ಬಂದಿಲ್ಲ. ಬೇಕಾದರೆ ನಾಳೆ ಬರುತ್ತಾರೆ. ಮತ್ತೆ, ತಿಳಿದೀತು. ಹಾಂ! ನಿಮ್ಮ ಕಥೆ ಯೇನಮ್ಮ, ಮತ್ತೆ? ಮುಂದುವರಿಸಿರಿ."

" ಏನಮ್ಮಾ ಇದು. ನನ್ನ ಕತೆಯೆಂದರೆ ಅಷ್ಟು ಮಿಗಿಲಾಯಿತಲ್ಲ. ನಿಮ್ಮ ವ್ಯವಹಾರ ಬಿಟ್ಟು ಕೇಳುತ್ತಿದ್ದೀರಲ್ಲ ! "

" ಹೌದಮ್ಮ. ಜೀವನ ಸಂಗ್ರಾಮದ ವಿಚಿತ್ರ ಅನುಭವಗಳನ್ನು ಕೇಳಿ ತಿಳಿಯುವುದೆಂದರೆ ಕುತೂಹಲವಲ್ಲವೇ ? " ಎಂದರು ಕಾಂಕ್ಷಾಪೂರಿತ ನೋಟದಿಂದ.

" ಏನಮ್ಮಾ ಇದು ಹಾಳು ಸುಡುಗಾಡು ಅನುಭವಗಳು, ಮಾನ ಮರ್ಯಾದೆಗಳನ್ನೂ ಮಾರಿಕೊಂಡು ಹೊಟ್ಟೆ ತುಂಬಿಸಿಕೊಳ್ಳುವುದು ಜೀವನವೇ ? "

" ಇಲ್ಲಮ್ಮ ನಿಮಗದರ ಸವಿ ಅಷ್ಟೊಂದು ಗೊತ್ತಿಲ್ಲ. ' ಹಿತ್ತಲಗಿಡ ಮದ್ದಲ್ಲವೆಂಬಂತೆ ' ನಿಮ್ಮ ಅನುಭವಗಳಿಗೆ ನೀವು ತುಚ್ಛೀಕರಿಸುವುದಾದರೂ ಇನ್ನೊಬ್ಬರು ಅದರ ಮಹತ್ವವನ್ನು ಕಾಣುವವರಿದ್ದಾರೆ. ನಿಮ್ಮ ಮನಸ್ಸಿಗೆ ಬೇಸರವಾಗದಿದ್ದರೆ ಮಾತ್ರ ಮುಂದುವರಿಸಿರಿ. "

" ನಿಮ್ಮೊಂದಿಗೆ ಮಾತು ಕಟ್ಟುವವರೇ ಇಲ್ಲವಮ್ಮ. ನೀವು ಜಾಣ್ಮೆಯಿಂದಲೇ ನನ್ನಂಥವರನ್ನು ಬಂಧಿಸಿ ಬಿಡುತ್ತೀರಿ. ಅಂತೂ, ನನ್ನ ಕರ್ಮಫಲವನ್ನು ಕೇಳಲು ನಿಮ್ಮ ಕಿವಿ ತಾವರೆ ಅರಳುವಾಗ ನಾನೇಕೆ ಅದನ್ನು ಮರೆಯಿಸಬೇಕು. "

ಶಾಂಭವಿಯ ಮುಖ ಪ್ರಫುಲ್ಲಿತವಾಯಿತು. ಮೆಚ್ಚಿದ ಹಾಸ್ಯವನ್ನು ತೋರಗೊಡುವ ಲಘು ನಗೆಯೊಂದು ಮಿಂಚಿತು.

" ಪಾಪಿ ಹೋದಲ್ಲೆಲ್ಲ ಮೊಣಕಾಲುದ್ದ ನೀರೇ....! ಅಮ್ಮ ಬರುವವರೆಗೆ ನಾನೇ ಅವರ ಪತ್ನಿಯಾದೆ. ಆಗು-ಹೋಗುಗಳ ಗೊಡವೆಯಿಲ್ಲದೆ ಅವರ ಸೇವೆ ಸಲ್ಲಿಸಿದೆ. ಒಂದು ದಿನ ಅವರೇ " ಅವಳಿಗಿಂತಲೂ ಮಿಗಿಲಾದ ಸುಖವನ್ನು ನಿನ್ನಿಂದ ಪಡೆದೆ. ನೀನೆನ್ನ ಪಾಲಿನ ಭಾಗ್ಯ ದೇವತೆ " ಎಂದು ಮೆಲುನುಡಿದು ಮುದ್ದಿಸುತ್ತಿದ್ದರು. ' ಹೊಲೆಯ ದಾರ ಧರಿಸಿದರೆ ಹಾರುವನಾದಾನೇ ' ಅಂತೆಯೇ.... "

" ಅಮ್ಮ ಹೆಣ್ಣು ಕೂಸೊಂದನ್ನು ಎತ್ತಿಕೊಂಡು ಮನೆ ಸೇರಿದರು. ನನಗಾಗಲೇ ಮೂರು ತಿಂಗಳು ದಾಟಿತ್ತು. ರಾಯರ ಮುದ್ದು ಕುವರಿ ಆ ಮನೆಯನ್ನು ಬೆಳಗಿತು. ನಮಗೆಲ್ಲರಿಗೂ ಸಂತೋಷ. ಆದರೆ.... ಅಮ್ಮ

ನವರ ಮನಸ್ಸು ಅಷ್ಟೊಂದು ತಿಳಿಯಾಗಿರಲಿಲ್ಲ. ನನ್ನನ್ನು ಕಂಡೊಡನೆ ಅವರಲ್ಲಿ ಒಂದು ತರದ ಶಂಕೆ ಬಾಧಿಸುವಂತಿತ್ತು. ಅಮ್ಮನವರ ಸಮಕ್ಷಮ ದಲ್ಲಿ ನನ್ನನ್ನು ಕಂಡರೆ, ಅನಿರೀಕ್ಷಿತ ದಿಗಿಲಾದವರಂತೆ ರಾಯರ ಮುಖ ವಿವರ್ಣವಾಗುತ್ತಿತ್ತು. ಆದರೆ ಆ ತರದ ವರ್ತನೆ ನನಗೂ ದಿಗಿಲುಂಟು ಮಾಡುತ್ತಿತ್ತು. ಕೆಲವೊಮ್ಮೆ ರಾಯರು ಇದ್ದಕಿದ್ದಂತೆ ಬೆದರಿದ ಜಿಂಕೆ ಯಂತೆ ಓಡಿಹೋಗುವುದೂ ಇತ್ತು. ಇದರ ಅರ್ಥ ನನಗಾಗುತ್ತಿರಲಿಲ್ಲ. ಆದರೆ ಅಮ್ಮನವರ ಶಂಕಾಜ್ವಾಲೆಗೆ ಮಾತ್ರ ತುಪ್ಪದಾಹುತಿ ಇತ್ತಂತಾಗು ತ್ತಿತ್ತು. ನಾನು ಮಾತ್ರ ಏನೂ ತಿಳಿಯದವರಂತೆ ಆದಷ್ಟು ಜಾಗ್ರತೆಯಿಂದ ಮೊದಲಿನಂತೆಯೇ ಹೊಂದಿಕೊಂಡಿರುತ್ತಿದ್ದೆ. ಬಚ್ಚಿಟ್ಟ ವಸ್ತು ಅದೆಷ್ಟು ಸಮಯ ಗುಪ್ತವಾಗಿಯೆ ಉಳಿದೀತು ? ಅದರಲ್ಲೂ ಬೆಳೆಯುತ್ತಿರುವ ಜೀವ.........! ಹಾಗೂ ಹೀಗೂ, ಯಾವ ತೊಂದರೆಯೂ ಇಲ್ಲದೆ ಒಂದು ತಿಂಗಳನ್ನು ಅಮ್ಮನವರೊಂದಿಗೆ ಕಳೆದೆ. ಒಂದು ದಿನ ನನ್ನ ಕಳ್ಳತನದ ಗುಟ್ಟು ಅವರಿಗೆಂತೋ ತಿಳಿದುಹೋಯಿತು. ಇನ್ನು ನನ್ನ ಅವಸ್ಥೆ ಹೇಳ ಬೇಕೆ ? ಕೈಹಿಡಿದ ಗಂಡನನ್ನು, ಮೋಹಿಸಿದವಳನ್ನು ಕಂಡರೆ ನಿಜಪತ್ನಿಗೆ ಹೇಗಾದೀತು ? ಕ್ರೋಧದ ರೌದ್ರಾವತಾರವೂ ಕಣ್ಣೀರ ಕೋಡಿಯೂ ಏಕ ಕಾಲದಲ್ಲೇ ಅಮ್ಮನವರಿಗೊಲಿದಿತ್ತು. ಗಂಡ ಹೊರಗೆ ಹೋದ ಸಮಯ ನನ್ನನ್ನು ಜರೆದಳು, ಬೈದಳು, ಭಂಗಿಸಿದಳು. ತನ್ನ ಅವಿವೇಕಕ್ಕಾಗಿ ಹಲುಬಿ ದಳು. ಸುಖಪ್ರದವಾಗಿದ್ದ ಹಾಲು ಜೀವನಕ್ಕೆ ಹುಳಿ ಹಿಂಡಿದ ರಾಕ್ಷಸಿ ಎಂದಳು. ಕೊನೆಗೆ ಮನೆಯಿಂದ ತೊಲಗೆಂದು ಮೈಮುಟ್ಟಿ ದೂಡಿದಳು. ಆಗ ನನಗೇನು ಅಧಿಕಾರವಿತ್ತು ? ಎಲ್ಲವನ್ನೂ ಕಣ್ಣೀರ ಹನಿಯಿಂದ ತಣಿಸಿಕೊಳ್ಳಬೇಕಿತ್ತು. ಕೋಪದ ಮತ್ತಿನಲ್ಲಿ ನನ್ನನ್ನು ದೂಡಿದ ರಭ ಸಕ್ಕೆ ನಾನು ಆಧಾರ ತಪ್ಪಿಕೊಳ್ಳಲು ಗೋಡೆಯಲ್ಲಿ ತೂಗಹಾಕಿದ ಮೆಟ್ಟು ಕತ್ತಿಗೆ ನನ್ನ ಹಣೆಯನ್ನು ಮುದ್ದಿಸಿತು. ಇದನ್ನೇನೆನ್ನಲಿ ? ನನ್ನ ಜೀವ ನಕ್ಕೆ ಸಾಕ್ಷಿಯಾದ ರಕ್ತ ತರ್ಪಣವೆನ್ನಲೇ ? ಲಲಾಟ ಮಧ್ಯದಿಂದ ರಕ್ತ ಹೊರಹೊಮ್ಮಿತು. ಅಮ್ಮನ ಕ್ರೋಧದೆದುರಿಗೆ ಶಾಮಕವಾಯಿತು. ಇಲ್ಲಿ ನೋಡಿರಿ, ಆ ಗಾಯದ ಕಲೆಯಿನ್ನೂ ಮಾಸಲಿಲ್ಲ."

"ನನ್ನ ದುರವಸ್ಥೆಯನ್ನು ಕಂಡು ರಾಯರು ಮರುಗಿದರು. ಅವರ

ಹೃದಯವು ತನ್ನ ತಪ್ಪಿಗಾಗಿ ಕ್ಷಮೆ ಯಾಚಿಸುತ್ತಿತ್ತು. ತುಟಿ ಬಿಚ್ಚಿ ಪಿಟ್ಟೆನ್ನುವ ಧೈರ್ಯವೂ ಇರಲಿಲ್ಲ ಆ ನಾರೀಶ್ವರನಿಗೆ........ ರಾತ್ರಿ ಅವರಿಗೂ ಮಡದಿಗೂ ದೀರ್ಘ ಕೋಲಾಹಲವಾಯಿತು. ಮಾತಿನ ಮಲ್ಲಯುದ್ಧದಲ್ಲಿ ಅಶ್ರುವೃಷ್ಟಿ ಘೋರೆಂದು ಸುರಿದಿತ್ತು. ಯಾವ ಮಾತು ಆಡಿದರೂ ಅಳು ಧ್ವನಿಯಲ್ಲಿ ಆಡುತ್ತಿದ್ದ ಅಮ್ಮನ ಮಾತೇ ತೀಕ್ಷ್ಣವಾಗಿತ್ತು. ನಾನು ನನ್ನ ಕೋಣೆಯಲ್ಲಿದ್ದೆ. ನಿಶ್ಚಿಂತಳಾಗಿ ನಿದ್ರೆ ಬಂದವಳಂತೆ ಮಲಗಿ ಎಲ್ಲವನ್ನೂ ಕಳ್ಳ ನಟನೆಯಲ್ಲಿ ಕೇಳುತ್ತಿದ್ದೆ. ರಾಣಿಯ ಪ್ರತಿಯೊಂದು ಮಾತುಗಳೂ ನನ್ನೆದೆಯನ್ನು ಕ್ರೂರಾಂಬುಗಳಂತೆ ಚುಚ್ಚುತ್ತಿತ್ತು. ಮಾತು ಮಾತಿನ ಕೊನೆಯ ತಿರ್ಮಾನ: "ಇನ್ನು ಅವಳು ಈ ಮನೆಯಲ್ಲಿದ್ದುದಾದರೆ ನಾನು ತಾಯಿ ಮನೆಗೇ ಹೊರಟು ಹೋಗುವೆನು." ಎಂದ ಹಟೋಕ್ತಿಯು ನನ್ನ ಕಿವಿರಂಧ್ರವನ್ನು ಕೊರೆಯಿತು. ಹೌದು, ನಾವಿಬ್ಬರೂ ರಾಯರ ಸುಖದಲ್ಲಿ ಪಾಲುಗೊಳ್ಳುವುದು ಅಸಾಧ್ಯ. ಸವತಿ ಮಾತ್ಸರ್ಯ. ಸಿರಿತನ.... ಬಡತನ ಸರಿದೋರದು. ನಾನೆಷ್ಟೆಂದರೂ ಅಭಾಗಿನಿ. ಪಾಪಿ! ರಾಯರು ತುಂಬ ಹೆದರಿಕೆಯ ಜನ. ಮೊತ್ತಮೊದಲು ಬಾಯಿಗೆ ಬಾಯಿ ತಟ್ಟಿದರೂ, ನಂತರ ಹೆಂಡತಿಯ ಬೆದರಿಕೆ....ನುಡಿಗಾರಿಕೆಗೆ ರಾಯರ ನಾಲಿಗೆ ತಿರುಗದೆ ನಿಶ್ಚೇತನಗೊಂಡಿತು. ಮತ್ತೆ ಹೆಂಡತಿಯ ಯಾವ ಮಾತಿಗೂ ಇದಿರಾಡಲಿಲ್ಲ. ಬಗ್ಗಿದ ಗಂಡನನ್ನು ಗುದ್ದುವಂತೆ, ಹಲವಾರು ಕ್ರೂರನುಡಿಗಳಿಂದ ರಾಯರನ್ನು ಕುಕ್ಕುತ್ತಿದ್ದರು. ಹಾಗೂ ಹೀಗೂ ಬಿರುಗಾಳಿ ಸುರಿಮಳೆಗಳಾದ ನಂತರ ಪ್ರಕೃತಿಯು ನಿಶ್ಶಬ್ದವಾಗುವಂತೆ ಮನೆಯೂ ಶಾಂತವಾಯಿತು. ನಾನು ಬಿದ್ದುಕೊಂಡ ತಲೆದಿಂಬು ಒದ್ದೆಯಾಗಿತ್ತು. ನನ್ನ ಮನ ನಿರ್ಮಲವಾಗಲು ಕಣ್ಣೀರ ಕೋಡಿಯನ್ನೇ ಹರಿಸಿದೆ. ಇನ್ನು ಯಾರನ್ನು ದೋಷಿಸಿ ಏನು ಪ್ರಯೋಜನ? ನನ್ನಿಂದಲೇ ನಾನ್ಹಾಳಾದೆ ಎಂದು ಭಾವಿಸಿದೆ.

"ಮಾರನೆಯ ದಿನ ಬೆಳಿಗ್ಗೆ, ಸೆರೆಮನೆಯಿಂದ ಬಿಡುಗಡೆಯಾದ ಕೈದಿಯಂತೆ ರಾಯರು ನನ್ನನ್ನು ಇದಿರ್ಗೊಂಡರು. ಅವರ ಮುಖ ನೋಡುವ ಧೈರ್ಯ ನನಗುಂಟಾಗಲಿಲ್ಲ. ನಾನೇನು ಅರಿಯದವಳಂತೆ ವರ್ತಿಸಬೇಕೆಂದು ನಿರ್ಧರಿಸಿದೆ. ಆದರೆ ರಾಯರ ಮುಖದಲ್ಲಿ ನಾಚಿಕೆ ಅಂಜಿಕೆಗಳ ರೂಪ

ರೇಖೆಗಳು ನರ್ತನಗೈಯ್ಯುತ್ತಿದ್ದುವು. ಮರ್ಯಾದಸ್ಥನೊಬ್ಬನು ಅಪವಾದ ದಲ್ಲಿ ಸಿಲುಕಿದಾಗ ಮತ್ತೆ ಹೇಗಿದ್ದಾನು ? ರಾಯರು ನನ್ನ ಮುಂದೆ ನಿಂತು ನನ್ನ ಕೈಗಳಲ್ಲಿ ನೂರು ರೂಪಾಯಿಯ ನೋಟೊಂದನ್ನು ಕೊಟ್ಟು, 'ಹೋಗು.... ಇನ್ನು ನನಗೆ ಕೆಲಸಕ್ಕೆ ಜನ ಬೇಡ' ಎಂದಷ್ಟು ಒದರಿ ದರು. ಅಪಮಾನ! ನಿಜ. ಅಪಮಾನವು ಹುಡುಕಿದ್ದಕ್ಕೆ ಫಲವಾಗಿ ಪರಿಣಮಿಸಿತು. ಆದರೆ ಇದಾವ ಧರ್ಮ ?........ ಛಿ! ಗೌರವಸ್ಥರಾದರೂ ಎಂತಹ ಕಪಟಿಗಳಪ್ಪಾ! ಅವರಿಗಾಗಿ ನನ್ನ ಆತ್ಮವನ್ನೇ ಸಾಕ್ಷಿಯಾಗಿತ್ತೆ; ಅವರ ಸುಖಕ್ಕಾಗಿ ನನ್ನೀ ದೇಹವನ್ನೇ ಅರ್ಪಿಸಿದೆ. ನನ್ನೀ ದೇಹದ ತನಿರಸ ವನ್ನು ಹೀರಿ, ತನ್ನ ಮಡದಿಯಲ್ಲಿ ಕಾಣದ ಸುಖವನ್ನು ಕಂಡರು......... ಆದರೆ ಕಡೆಗೆ ಅವರು ನನಗಿತ್ತ ಬಹುಮಾನ.........ಸುಖಭೋಗಗಳಿಗಾಗಿ ನನ್ನನ್ನೇ ಬಲಿ ತೆಗೆದುಕೊಂಡವರು ಇಂದು ಹೆಂಡತಿಯನ್ನಿದಿರಿಸುವ ಸಾಮ ರ್ಥ್ಯವಿಲ್ಲದೆ, ಸ್ತ್ರೀದಾಸನಂತೆ ಆಕೆಯ ಪಾದಸೇವೆಯನ್ನೇ ಮಾಡುವಲ್ಲಿ ನನ ಗಾವ ಆಸರೆ ಇದೆ? ಸತಿಯುಳ್ಳವರಾದರೂ ಪ್ರೇಮಬಂಧನದಲ್ಲಿ ಮೋಹಿತ ರಾಗಿರುವುದರಿಂದ ನನ್ನನ್ನಾವ ರೀತಿಯಿಂದಲಾದರೂ ಪಾಲಿಸಿಕೊಂಡಿದ್ದಾ ರೆಂದು ಆಶಿಸಿದ್ದೆ. ಈಗ ನಂಬಿದ ದೈವವೇ ನಿರ್ಜೀವ ಕಲ್ಲ ಮೂರ್ತಿ ಯಾಗಿಬೆ ಎನ್ನುವಾಗ ನಾನೇನು ಮಾಡಲಿ ?.... ಸರಿ. ತಪ್ಪು ಅವರದಲ್ಲ; ನನ್ನದು! ದುಡುಕಿದ ದುಡುಕಿನ ಫಲವು ನನ್ನ ಕೈಯಲ್ಲಿ ಬಿದ್ದಿತು. ಕೈ ಹಿಡಿದ ಪತ್ನಿಯಿರುವಾಗ ನಾನು ಮುಂದಾಲೋಚನೆ ಮಾಡಬೇಕಿತ್ತು. ಅವರಿ ಬ್ಬರ ಮಧ್ಯೆ ನನಗೂ ಸ್ಥಾನವಿದೆಯೋ ಎಂದು ನೋಡಿಕೊಳ್ಳಬೇಕಿತ್ತು. ಆದರೆ ನನ್ನನ್ನು ಬಂಧಿಸಿದ್ದು ಮೋಹಪಾಶ. ಅಬ್ಬ! ವಿಧಿಯಾಟವೆ? ಇನ್ನು ನನಗಲ್ಲಿ ಸ್ಥಾನವಿಲ್ಲ. ತಪ್ಪಿತಸ್ಥಳಂದೇ ತಲೆ ತಗ್ಗಿಸಿಕೊಂಡು ಹೊರ ಬಿದ್ದೆ. ನನ್ನ ಹಣೆಯಲ್ಲಿದ್ದ ಬ್ರಹ್ಮಲಿಪಿ ಇದೇ ಇದ್ದಿರಬೇಕೆಂದು ನೆನ ಸಿದೆ.

"ಪ್ರಣಯ ಧಾಂದಲೆಯಲ್ಲಿ ಸಿಲುಕಿದ ನನ್ನ ಜೀವನ ಬೆಂದು ನುಚ್ಚು ನೂರಾಗಿ ಹೋಯಿತು. ಸುಖಕ್ಕಾಗಿ ಯಜಮಾನ ಎಂಬ ಅಭಿಮಾನದಿಂದ ನನ್ನ ದೇಹವನ್ನು ಅರ್ಪಿಸಿದ್ದಕ್ಕೆ ಸರ್ವನಾಶವಾಯಿತು. ಇನ್ನೇನು ಉಳಿ ಯಿತು ? ಅನ್ನ ಕೊಟ್ಟು ಆಶ್ರಯ ಕೊಟ್ಟ ಮನೆಯೇ ನನ್ನನ್ನು ಹೊರಕ್ಕ

ಟ್ಟಿತು. ಇನ್ನೆಲ್ಲಿ ಸುಖ ಕಾಣಲಿ? ಯಾರನ್ನು ಮರೆ ಹೋಗಲಿ? ತಲೆ ತಿರುಕಳಂತಾಗಿ ಬೀದಿಗಿಳಿದ ನಾನು ಎಲ್ಲಿ ಹೋಗಲೆಂದು ತಿಳಿಯಲಿಲ್ಲ. ನೆಲೆಯ ಅಲೆಯೂ ಮೂಡಲಿಲ್ಲ. ದುಃಖೋನ್ಮುಖಳಾಗಿ ನಡೆದೆ. ನಡೆದ ದೂರದ ಪರಿವೆಯಿರಲಿಲ್ಲ. ನಡೆನಡೆದು ಕಡಲ ದಂಡೆಯ ಬಳಿ ಸಾರಿದೆ. ಬಿಡುವಿಲ್ಲದೆ ನನ್ನ ಮೆದುಳು ಕೆಲಸ ಮಾಡುತ್ತಿತ್ತು. ಸಮುದ್ರದ ತೆರೆಗಳ ಬಡಿದಾಟ ಕಂಡು ನನಗೆ ಜೀವನದ ಅರಿವಾಯಿತು. ಜೀವನವೆಂಬುದು ಸುಖದುಃಖಗಳೊಳಗಿನ ಹೊಡೆದಾಟ. ದಡದಲ್ಲಿ ನಿಂತು ಬುಸುಗುಟ್ಟುತ್ತಾ, ಭೋರ್ಗರೆಯುತ್ತಿದ್ದ ಜಲರಾಶಿಯನ್ನು ಕಂಡು ನನ್ನ ಮನ ಸ್ವಲ್ಪ ಶಾಂತ ವಾಯಿತು. ಕೆಲಕಾಲ ಸ್ತಬ್ಧಳಾಗಿ ನಿಂತುಕೊಂಡು ನೀರ ಸೆಳೆಯನ್ನು ನೋಡು ತ್ತಿದ್ದೆ. ಬಿಸಿಲೇರಿ, ನೆತ್ತಿ ಸುಡುತ್ತಿತ್ತು. ನನಗೆ ಇದಾವುದರ ಪರಿವೆಯೂ ಇರಲಿಲ್ಲ. ತಂಗಾಳಿ ಮೈಸೋಂಕಿ ತುಂತುರು ಹನಿಗಳು ಮೈಗಪ್ಪಳಿಸಿದಾಗ ಶ್ರೀನಿವಾಸನೂ ನಾನೂ ಪರೀಕ್ಷಾ ಕಾಲದಲ್ಲಿ ಸಮುದ್ರತೀರ ಸೇರಿ ಆಡಿದ ಸರಸದ ಚೆಲ್ಲಾಟಗಳ ಸವಿ ನೆನಪಾಯಿತು. ಆಹಾ! ಜೀವನವೆ!! ಅಂದಿನ ಆನಂದವೇನು? ಇಂದಿನ ಕೊರಗು........ ನಿಂತಲ್ಲೇ ಕಲ್ಲಿನಂತೆ ಆಲೋಚಿಸುತ್ತಿದ್ದೆ. ಇಹದ ಪರಿವೆಯಿಲ್ಲದೆ ಭಾವನಾ ಪ್ರಪಂಚದಲ್ಲಿ ಮನಸ್ಸು ಎತ್ತಲೋ ಸಂಚರಿಸುತ್ತಿತ್ತು. ಅಂದಿನ ಸೊಗಸು ಇಂದಿನ ಕೊರಗುಗಳಿಗೆ ಪರಿವರ್ತಿಸಿದ ಘಟನೆಗಳು ಹೃದಯಭೇದಕ ನೋವನ್ನುಂಟು ಮಾಡಿತು. ಶ್ರೀನಿವಾಸನ ಪವಿತ್ರ ಹೃದಯದ ನಿರ್ಮಲ ಮೂರ್ತಿ ನನ್ನ ಕಣ್ಣ ಮುಂದೆ ಬಂದು ನಿಂತಂತಾಯಿತು. ಇನ್ನೆನ್ನ ಜೀವನ ನಿಸ್ಸಾರವೆಂದು ಮನದಟ್ಟಾ ಯಿತು. ಇನ್ನೇಕೆ ನನಗೀ ಬಾಳು ಎಂದು ತೋರಿತು. ಇನ್ನು....ನಾನು ಮಾಡಿದ ಅಪರಾಧಗಳಿಗೆ ನನ್ನೀ ಜಡದೇಹವನ್ನೇ ಬಲಿಕೊಡುವುದೆಂದೂ, ಆತ್ಮಹತ್ಯೆಯೇ ಮುಂದಿನ ದಾರಿಯೆಂದೂ ನಿರ್ಧರಿಸಿದೆ. ಇನ್ನು ವಿಳಂಬಿಸಿ ಪ್ರಯೋಜನವಿಲ್ಲ. ನಾನೀಗಲೇ ಹೊರಟೆ ಎಂದುಕೊಂಡು ಸುತ್ತಲೂ ಪ್ರಕೃತಿಯನ್ನೊಮ್ಮೆ ದಿಟ್ಟಿಸಿದೆ. ಇನ್ನು ನಾನು ಮುದ್ದಿಸಲಿರುವ ಜಲರಾಶಿ! "ಹಾ! ನನ್ನ ಪ್ರಿಯ....ಸಮುದ್ರರಾಜ, ನೀನೆನ್ನ ಪಾಪಿ ದೇಹವನ್ನು ಬಯ ಸಿದೆಯಾ? ಇರಲಿ. ನೀನಾದರೂ ನನ್ನಲ್ಲಿ ಕನಿಕರ ತೋರಿದೆ. ಜೀವನ ವನ್ನು ಪಣವಾಗಿಟ್ಟು ಸೇವೆ ಪಡಕೊಂಡ ದುರಾತ್ಮರಿಗೆ ನನ್ನಲ್ಲಿ ಕರುಣೆ

ಯಿಲ್ಲ. ಅವರು ಕ್ರೂರಿಗಳು; ಅಧಮರು; ತಿಳಿಗೇಡಿಗಳು. ಕೈಹಿಡಿದ ಪತಿಗೆ ಸಮಾಧಾನವಾಗಿ, ನಾನು ನಿನ್ನ ಆಶ್ರಯ ಪಡೆದಿರುವೆನು ಎಂದು ಮೊದಲೇ ಸಾರಿರುವೆನು. ನಾನು ಹೇಗೂ ಅವರ ಪಾಲಿಗೆ ಸತ್ತಂತೆಯೇ ಸರಿ. ನೀನೇ ಕರುಣಾಳು, ಜಗವಂದ್ಯ, ಅನಾಥರಕ್ಷಕ! ಇದೋ ನಾನೀಗಲೇ ಬರುವೆನು. ನನ್ನನ್ನು ಸ್ವೀಕರಿಸಿ ತೃಪ್ತಿಹೊಂದು" ಎಂದು ಆ ನೀರ ಮಡಿಲನ್ನು ನೋಡಿದೆ. ತೆರೆಯ ಅಬ್ಬರ ನನ್ನನ್ನೋಡಿಸಿಕೊಂಡು ಬಂದಂತೆ ನನ್ನ ಪಾದಗಳನ್ನು ತೊಳೆಯಿತು. ಗಾಳಿಯ ರಭಸಕ್ಕೆ ಸೆರಗು ಹಾರುತ್ತಿತ್ತು. ಕೂದಲು ನರ್ತಿಸುತ್ತಿತ್ತು. ಹಾ! ಆಗಲೇ ನನ್ಮುಂದೆ ಪಟ....ಪಟ....ಪಟ! ಎಂದು ಶಬ್ದ ಕೇಳಿದಂತಾಯಿತು. ತೆರೆಯ ಸೆಳವಿನಲ್ಲಿ ಬಿದ್ದಿದ್ದ ಮೀನೊಂದು ಮರಳ ದಂಡೆಯಲ್ಲಿ ಕುಣಿಯುತ್ತಿತ್ತು. ನೀರಿಗಾಗಿ ಹಾತೊರೆಯುತ್ತಿತ್ತು. ಇದೂ ಜೀವನವಲ್ಲವೆ? ನನ್ನ ಜೀವನ ಪ್ರತಿರೂಪ! ಬದುಕಿಗಾಗಿ ಹೋರಾಡುತ್ತಿದೆ. ಜೀವದ ಹಂಗಿಗಾಗಿ ತೊಳಲಾಡುತ್ತಿದೆ. ಈಗಲೋ ಇನ್ನೊಂದು ಕ್ಷಣದಲ್ಲೋ ಅದರ ಆತ್ಮ ಹಾರಿಹೋಗಲಿದೆ. ಆ, ಹಾ! ಘೋರ ತೆರೆಯೊಂದು ದಂಡೆಗಪ್ಪಳಿಸಿತು. ಮೀನು....ಜೀವನಕ್ಕಾಗಿ ಹೆಣಗಾಡುತ್ತಿದ್ದ ಮೀನು ತೆರೆಯೊಂದಿಗೆ ಹೋಯಿತು. ಅಯ್ಯೋ, ಭಗವಂತನ ಲೀಲೆಯೆ! ಪ್ರಾಣ ಬಿಡಲಿದ್ದ ಜೀವಿಯು ಆತನ ಮಾಯಾಲೀಲೆಯಿಂದ ಪುನಃ ಸುಖದ ದೇಗುಲವನ್ನು ಹೊಕ್ಕಿತು. ಇದಲ್ಲವೆ ನನ್ನ ಜೀವನದ ಪ್ರತಿರೂಪ! ಹಾಗಾದರೆ ನನ್ನ ಆತ್ಮಹತ್ಯೆ....ಛೀ....ಅದೆಂದೂ ಆಗಲಾರದು. ನನ್ನ ಹೊಟ್ಟೆಯೊಳಗಿದ್ದ ಇನ್ನೊಂದು ಜೀವ ನನ್ನಾತ್ಮವನ್ನು ಕರೆದಂತಾಯಿತು. ಇಲ್ಲ....ಇದೇನು ಆತ್ಮಹತ್ಯೆ! ನಾನು ಒಬ್ಬಳೇ ಅಲ್ಲ, ನನ್ನುದರಲ್ಲಿನ್ನೊಂದು ಜೀವಿಯಿದೆ. ಅದನ್ನು ಹತ್ಯ ಮಾಡಿ ಘೋರ ಪಾಪಕ್ಕೆ ತಲೆಯೊಡ್ಡಿದಂತಾಗುವುದು. ಆದರೆ........ನನಗೆಲ್ಲಿದೆ ಸ್ಥಾನ? ಮಗು, ಬದುಕಿಯುಳಿದರೆ ಸಮಾಜ ಬಾಹಿರರಾಗುವೆವು. ಹಾಗಾದರೆ ನಾನೇಕೆ ಬದುಕಲಿ? ಹೆಣ್ಣಿಗೆ ಮಕ್ಕಳೆಂದರೆ ಪ್ರೀತಿ. ಹೆತ್ತಾಕೆಗೆ ಕರುಳಿನ ಪ್ರತಿರೂಪವೆಂದರೆ ಪ್ರಾಣ. ಸಮಾಜಕ್ಕೆ ನಾನು ಬೇಡವಾದರೆ ನನ್ನ ಮಗು ನನಗೆ ಬೇಕು. ಕ್ಷಮೆಯಿಲ್ಲದ ಪಾಪಕ್ಕೆ ಕೈಯಿಕ್ಕಿ ಅಪರಾಧಿಯಾಗಲಾರೆ. ಶಿಶುಹತ್ಯೆಯು ನನಗೆ ನರಕಲೋಕದ ಬುತ್ತಿಯಾಗದಿರಲಿ! ಆದರ ಜೀವ

ಉಳಿಸಲು ನನಗೆಂಥ ಕಷ್ಟ ಬಂದರೂ ಸಹಿಸುವೆನು. ಅದಕ್ಕಾಗಿ ನನ್ನ ಜೀವವನ್ನೇ ಅರ್ಪಿಸಲೂ ಸಿದ್ಧಳು, ಎಂಬ ನವಜ್ಞಾನೋದಯವಾಗಿ ನಾನು ಆ ದಂಡೆಯಿಂದ ಹಿಂತಿರುಗಿದೆ.

" ಮುಂದೆ ನನ್ನ ಜೀವನವೆಂತು....ಕೆಲಸವೆಲ್ಲಿ ಹುಡುಕಿದರೂ ದೊರೆಯಲಾರದು. ಯಾರಲ್ಲಿಯೋ ಹೋಗಿ ಕೆಲಸ ಕೇಳಲು ನಾಚಿಕೆಯಾಗುತ್ತಿತ್ತು. ಅನ್ನಕ್ಕಾಗಿ ಉದರ ಬೊಬ್ಬಿಡುತ್ತಿದೆ. ಎದೆಯಲ್ಲಿ ಇನ್ನೊಂದು ಜೀವ ನನ್ನನ್ನು ಹೊಂದಿಕೊಂಡಿದೆ. ಆದರೆ ಜೀವನಕ್ಕಾವ ಉಪಾಯ ? ಕಡಲ ತೀರದಿಂದ ಹಿಂತಿರುಗುತ್ತಿದ್ದೆ. ಆದರೆ ತಲೆಯಲ್ಲಿ ನಾನಾ ವಿಧದ ಆಲೋಚನೆಗಳು ತಳಮಳಗೊಳ್ಳುತ್ತಿದ್ದುವು. ಉಪಾಯ ಕಾಣದೆ ಭಿಕ್ಷುಕರ ಶಿಬಿರದಲ್ಲಿ ಆಶ್ರಯ ಹೊಂದಿದೆ. ಹರಕು ಮುರುಕು ಛತ್ರ, ಉಡಲು ವಸ್ತ್ರವಿಲ್ಲ, ತೊಡಲು ಕುಪ್ಪಸವಿಲ್ಲ. ಮಲಗಲು ಒರಟು ನೆಲ. ಅಯ್ಯೋ ನನ್ನ ಪಾಡೆ ? ಇಂದು ಅದನ್ನೆಲ್ಲ ಹೇಳಲು ನಾಲಿಗೆ ನಾಚುತ್ತದೆ. ಆಗುವುದೆಲ್ಲ ಆಗಿ ಹೋಗಿದೆ. ನೆಲೆ ನಿಂತ ಶಿಬಿರವೆಂದರೆ ಬಡವರ ಅರಮನೆ! ಅದಕ್ಕಿದ್ದ ಮಾಡೆಂದರೆ ಆಕಾಶ; ಗೋಡೆಗಳು ಅಷ್ಟದಿಕ್ಕುಗಳು; ಹಾ! ಅದೆಂತಹ ಜೀವನ....ಕೈಯಲ್ಲಿದ್ದ ರೂಪಾಯಿ........ರಾಯರು ಉದಾರ ಹಸ್ತದಿಂದ, ಹೋಗುವ ಕಾಲದಲ್ಲಿ ಕೈಗಿತ್ತ ಹಣ........ನಿರ್ನಾಮವಾಗುವ ವರೆಗೆ ಬೇಡದೆ ಬದುಕಿದೆ. ಮಾನಕ್ಕೆ ಮರೆ ಇಲ್ಲದಿದ್ದರೂ ತಿಂಡಿಗೆ ತತ್ತರ ಬರಲಿಲ್ಲ. ಆದರ ನಂತರ, ಹಣ ಖಾಲಿಯಾದಂತೆ ತಿಂಗಳು ತುಂಬುತ್ತಾ ಬಂತು. ಇದು, ಊರವರು ನನ್ನ ಗೌರವಕ್ಕೆ ಬೆಲೆ ಕಟ್ಟುವ ಸಮಯ. ಎಲ್ಲರ ಕಣ್ಣುಗಳೂ ಅಚ್ಚಳಿಯದೆ ನನ್ನನ್ನು ಅನುಸರಿಸುತ್ತಿದ್ದವು. ಎಂಟು ತಿಂಗಳು ಪೂರ್ತಿ ತುಂಬಿದೆ. ಕೂಳಿಗೆ ಗತಿಯಿಲ್ಲ. ಜಠರಾಗ್ನಿ ಭುಗಿಲೆಂದು ಜ್ವಾಲೆ ಕಾರುತ್ತಿತ್ತು. ಹಸಿವನ್ನು ತಡೆಯಲಾಗಲಿಲ್ಲ. ಇನ್ನುಳಿದುದು ಒಂದೇ ದಾರಿ ....ಭಿಕ್ಷೆ. ಆಯಿತು. ಹೊಟ್ಟೆ ತಣಿಯಲು, ಅದಕ್ಕಾಗಿಯೂ ಹಿಂಜರಿಯಲಿಲ್ಲ. ಹರಕು ಸೀರೆ, ಕೆದರಿದ ಕೂದಲು, ಕೈಯಲ್ಲೊಂದು ಪಾತ್ರೆ ಹಿಡಿದು ಮದ್ರಾಸು ಪಟ್ಟಣದಲ್ಲಿ....ಮಂಗಳೂರು ಕಾಲೇಜಿನಲ್ಲಿ ' ರತ್ನ ' ಎಂದು ಹೆಸರುಪಡೆದ ನಾನು ಭಿಕ್ಷೆ ಬೇಡಲು ಹೊರಟೆ. ಹೊಟ್ಟೆಯನ್ನು ಹೊತ್ತು ಮನೆಮನೆ ತಿರುಗಿ ಬೇಡುವುದೂ ಪ್ರಯಾಸವಾಯಿತು. ಬಡ ಹೆಣ್ಣು ಜೀವ

ವೊಂದು ಇನ್ನೊಂದು ಜೀವವನ್ನು ಹೊತ್ತು ಪಡುತ್ತಿರುವ ಕಷ್ಟವನ್ನು ಕಂಡು ಮರುಗಿದ ಹಲವಾರು ತಾಯಿಯಂದಿರು ನನಗೆ ಗಂಜಿ ನೀರೆರೆದರು. ಈ ದುಃಸ್ಥಿತಿಗೆ....ನನ್ನ ಹೊಳಪಿನ ಮುಖ ಕಂಡು....ಕಾರಣವೇನೆಂದು ಕೇಳಿ ದರು. ನಾನೇನೆಂದು ಹೇಳಲಿ. ನಾನಾವ ಸಮರ್ಪಕವಾದ ಉತ್ತರವನ್ನೂ ಕೊಡದೆ, ವಿಧಿಯನ್ನಷ್ಟೆ ಹಲುಬಿಕೊಂಡೆ. ಇತರರನ್ನು ದೂರಿ, ಸುಮ್ಮನೆ ನನ್ನ ಮುಂದಾಳುತನಕ್ಕಾಗಿ ಆದ ಕಷ್ಟವನ್ನು ಇತರರ ಮೇಲೆ ಹೊರಿಸಿ, ನಾನೇಕೆ ಪಾಪದ ಹೊರೆಯನ್ನು ಕಟ್ಟಿಕೊಳ್ಳಬೇಕು. ಇನ್ನು ಕೆಲವು ಕಾಮ ಪೂರಿತ ಪುರುಷರು ನನ್ನನ್ನು ಕಂಡು ಕನಿಕರಪಟ್ಟಿರಬಹುದು. ಆದರೆ ನನ್ನ ಪರಿಸ್ಥಿತಿ ಕಂಡು ಕ್ರೋಧೋನ್ಮುಖರಾಗಿ ವೈಗೆ ನೀರೆಸೆದರು. ನಾಯಿ 'ಚೂ' ಬಿಟ್ಟರು. ಕೆಲವರು ಕನಿಕರದಿಂದ ಒಂದೆರಡಾಣೆ ಮುಖಕ್ಕೆಸೆದರು. ಅವರಾದರೂ ಪುಣ್ಯವಂತರಾಗಲಿ ಎಂದು ಮನವಾರೆ ವಂದಿಸಿದೆ. ಕೆಲವು ಮನೆಗಳಲ್ಲಿ ಗೇಟು ಸೇರಬೇಕಿದ್ದರೆ ನಾಯಿಯ ಹೆದರಿಕೆ ಹುಟ್ಟಿಸಿ ಓಡಿಸಿಬಿಡು ತ್ತಿದ್ದರು. ಹೌದು. ಅವರು ಶ್ರೀಮಂತರು....ನಾನು ಭಿಕ್ಷುಕಿ. ನನ್ನನ್ನು ಕಣ್ಣೆತ್ತಿ ನೋಡುವ ಯೋಗ್ಯತೆಯುಳ್ಳವರಲ್ಲ ಅವರು. ಆಗ ನನ್ನ ದುಃಸ್ಥಿತಿ ಯನ್ನು ಕಂಡು ನಾನೇ ಮರುಗಿದೆ. ವೃದ್ಧ ಪತಿಯೊಂದಿಗಾದರೂ ಇದ್ದರೆ ಇಷ್ಟು ಕಷ್ಟವಿರುತ್ತಿರಲಿಲ್ಲವೆಂದು ನೆನೆಸಿಕೊಂಡೆ. ಆದರೆ ಅವನ ಹೇಯ ವರ್ತನೆಗಳು ಹೊಳೆದಾಗ ಆ ಸುಖ ಜೀವನಕ್ಕಿಂತಲೂ ಈ ಭಿಕ್ಷುಕ ನೀತಿಯೇ ಉತ್ತಮವೆನಿಸಿತು. ಎಷ್ಟೆಂದರೂ ನನ್ನ ಜೀವನ ಕ್ಷುಲ್ಲಕವೆನಿಸಿತು. ಸ್ತ್ರೀಯು ಪುರುಷನ ಆಸರೆಯಿಲ್ಲದೆ ಬದುಕುವುದಸಾಧ್ಯವೆಂದು ಆಗ ಹೊಳೆಯಿತು. ಇದು ನನ್ನ ಗೋಳಿನ ಬಾಳಿನಲ್ಲಿ ಪ್ರಮಾಣಸಿದ್ಧ ಅನುಭವ. ಎಷ್ಟೇ ಧೀರಳಾದ ಸಂಸ್ಕೃತ ಮಹಿಳೆಯಾದರೂ ಆಕೆಗೆ ಪುರುಷನಾಶ್ರಯ ಅತ್ಯಗತ್ಯ! ಕೆಲವು ಹುಡುಗರಿಗೆ, ತುಂಟ ಪೋರರಿಗೆ, ನನ್ನನ್ನೂ ನನ್ನ ವೇಷವನ್ನೂ ಕಂಡು ತಮಾಷೆ ಕಂಡಿರಬೇಕು. ಕುಚೇಷ್ಟೆಯಾಡಿ ಕಲ್ಲೆಸೆದು ಸಂತಸಗೊಂಡು ನಗುತ್ತಿದ್ದರು. ಇದು ನನ್ನ ಜೀವನದ ಕರಾಳ ರೂಪ! ಹೊಟ್ಟೆಗಿಲ್ಲದ ಬೇಸರ ಒಂದೆಡೆ, ಊರ ಮಹನೀಯರ ಉಪಟಳ ಇನ್ನೊಂದೆಡೆ. ಕೆಲ ದಿನ ಗಂಜಿ ನೀರಿನ ಅಮೃತಪಾನವಾದರೆ ಇನ್ನು ಕೆಲವು ದಿನ ಕಾಡಬೇಳೆ ಸೊಪ್ಪು ಸದೆಗಳೇ ನೈವೇದ್ಯ. ಅಂತೂ ನಾನು ಗರ್ಭಿಣಿ. ಹೊಟ್ಟೆ ಯಲ್ಲಿದ್ದ

ಮಗುವಿನ ಮುಖ ಕಾಣಲು ಹಾತೊರೆಯುತ್ತಿದ್ದ ನಿರ್ಭಾಗ್ಯ ಮಾತೆ. ಒಂದು ವೇಳೆ ಆ ಸಮಯದಲ್ಲಿ ನಾನು ಗರ್ಭಿಣಿಯಾಗದಿರುತ್ತಿದ್ದರೆ ಯಾವನಾದರೂ ಪುರುಷನ ದಾಸಿಯಾಗಿ ಜೀವಿಸಬಹುದಿತ್ತು. ಆದರೆ....

" ನವ ಮಾಸ ತುಂಬಿತು. ಭಿಕ್ಷಾನ್ನವೆತ್ತಲು ಸುತ್ತುವಷ್ಟು ಶಕ್ತಿಯಿರಲಿಲ್ಲ. ಆದರೂ ಒದರಾಡುತ್ತಾ ಎರಡು ಮೂರು ದಿನ ಕಳೆದೆ. ಇನ್ನು ಬೀದಿ ಪಾಲಾಗುವುದು ಬೇಡವೆಂದು ಹೆಣ್ಣಾಸ್ಪತ್ರೆಯೊಂದನ್ನು ಹೊಕ್ಕೆ. ಅಲ್ಲಿ ವಿಚಾರಣೆಯಾಯಿತು; ಗರ್ಜನೆಯಾಯಿತು. ನಿರಾಕರಣೆಯಾಯಿತು. ನನ್ನ ಕಣ್ಣುಗಳು ದುಃಖಾಶ್ರುಭರಿತವಾಗಿದ್ದುವು. ಗತಿಹೀನೆಯಾದ ನನ್ನನ್ನು ಸ್ವೀಕರಿಸಬೇಕೆಂದು ಮುಖ್ಯಾಧಿಕಾರಿಣಿಯ ಕಾಲು ಹಿಡಿದು ಬೇಡಬೇಕಾಯಿತು. ಅವರಿಗೂ ನನ್ನಲ್ಲಿ ಸಂಶಯ ಮೂಡದಿರಲಿಲ್ಲ. ನನ್ನನ್ನು ಕೆಣಕಿ ಪ್ರಶ್ನೆ ಕೇಳಿದರು. ಆಮೇಲೆ ಅವರಿಗೂ ಕರುಣೋದಯವಾಯಿತು. ವಾತ್ಸಲ್ಯಪೂರಿತ ನುಡಿಗಳಿಂದ ನನ್ನನ್ನು ಸಂತೈಸಿ, ಆಸ್ಪತ್ರೆಯಲ್ಲಿ ದಾಖಲು ಮಾಡಿಸಿದರು. ಅಂತೂ ನನ್ನ ಅದೃಷ್ಟದಲ್ಲೇನೋ ಒಂದು ಸುಯೋಗವಿದ್ದಿತು.

" ಅಲ್ಲಿ, ನಾನು ನನ್ನ ಭಿಕ್ಷಾವೃತ್ತಿಯ ದಾಹವನ್ನು ಪರಿಹರಿಸಿದೆ. ಸುಖದ ವಿಶ್ರಾಂತಿಯಿಂದ ತಾಯಿಯ ಶುಶ್ರೂಷೆ ಪಡೆದೆ. ಯಾವ ವಿಧದಲ್ಲಿಯೂ ತಿಂಡಿ ತೀರ್ಥಗಳಿಗೂ, ಆರೋಗ್ಯಕ್ಕೂ ಲೋಪ ಬಾರದಂತೆ ಒಬ್ಬ ದಾದಿಯ ಅರೈಕೆಯಲ್ಲಿ ಸುಖ ಪಡೆದೆ. ದಿನ ಕಳೆಯಲು ಸುಖಕಷ್ಟಗಳೆರಡರ ಏಕರೂಪದಲ್ಲಿ ನನಗೊಂದು ಗಂಡುಮಗು ಹುಟ್ಟಿತು.

" ಈಗೆಲ್ಲಿದೆ ಆ ಮಗು ? " ಶಾಂಭವಿಯು ಕುತೂಹಲದಿಂದ ಕೇಳಿದಳು.

" ಅದೇನೆನ್ನಲಿಯಮ್ಮ.... ನನ್ನೊಡನೆ ಮಗುವಿದ್ದರೆ ನನ್ನ ಜೀವನ ಸೊಗಸಾಗಿ ಸಾಗಲಾರದೆಂದು ತೋರಿತು. ಅಂತೂ ಮಗುವನ್ನು ಜೀವಂತವಾಗಿ ನನ್ನೊಡಲಿಸಿಂದ ಬೇರ್ಪಡಿಸಿ ಅದರಂದವನ್ನು ಸವಿಯಬೇಕೆಂಬ ಬಯಕೆಯಷ್ಟೇ ಇದ್ದಿತು. ನನ್ನ ಆಶೆ ತೀರಲು, ಭಾವೀ ಜೀವನದ ಸಮಸ್ಯೆ ಬಲವಾಯಿತು. ನಾನು ಆಸ್ಪತ್ರೆಯಲ್ಲಿದ್ದ ಸಮಯ ನನ್ನ ಪಕ್ಕದ ಮಂಚದಲ್ಲಿ ಇನ್ನೊಬ್ಬ ಗರ್ಭಿಣಿ ಇದ್ದಳು. ನಾನು ಪ್ರವೇಶ ಪಡೆದ ಮರುದಿನ ಆಕೆಯೂ ಆ ಮಂಚಕ್ಕೆ ಬಂದಿದ್ದಳು. ಅವಳಿಗೂ ಸುಖ ಪ್ರಸವದಿಂದ ಹೆಣ್ಣು

ಮಗುವೊಂದು ಹುಟ್ಟಿತು. ಆದರೆ ವಿಧಿಯಾಟ ವಿಚಿತ್ರವಾಗಿತ್ತು. ಹುಟ್ಟಿದ ಒಂದು ದಿನದಲ್ಲೇ ಅದು ತೀರಿಹೋಯಿತು. ಆಶಾಪೂರ್ಣವಾಗಬಯಸಿದ್ದ ವಾತ್ಸಲ್ಯ ಬೀರಿದ ಆಕೆಯ ಹಂಬಲ ದೇವನಿಗೆ ಸಹಿಸದಾಯಿತು. ಮಗುವಿನ ಮರಣದಿಂದ ಅವಳಿಗಾದ ದುಃಖ ಅಷ್ಟಿಷ್ಟಲ್ಲ. ಅವರ ದುಃಖ ನೋಡಿ ನನಗೂ ತಡೆಯಲಾಗಲಿಲ್ಲ. ಈ ಸುಸಂದರ್ಭದಲ್ಲಿ ನನ್ನ ದಿಙ್ಮೂಢತೆಗೆ ಆಸರೆ ದೊರೆಯಿತು. ಅವರನ್ನು ಸಂತೈಸುತ್ತಾ, ಮಗುವಿಗಾಗಿ ದುಃಖಿಸ ಬೇಡಿರಿ. ನನ್ನ ಮಗುವನ್ನು ನಿಮಗೀಯುವೆನು. ನನ್ನ ದುರಾದೃಷ್ಟ ದಿಂದ ಅದನ್ನು ಸಲಹಲು ನನಗಸಾಧ್ಯವಿದೆ. ನಿಮ್ಮಲ್ಲಾದರೂ ಅದು ಎಲ್ಲೆ ಯಾಡಿಕೊಂಡಿರಲಿ ಎಂದು ತಿಳಿಸಿದೆ. ಅವರ ಮುಖ ಪ್ರಫುಲ್ಲವಾಯಿತು. ಗಂಡನಿಗೆ ಸಮಾಚಾರ ತಿಳಿಸಿದರು. ಅವರಿಗೂ ಆನಂದವಾಯಿತು. ಮಗು ವನ್ನು ಅಂದೇ ಕೈಯೆತ್ತಿ ದಾನ ಮಾಡಿದೆ. ಆನಂದ ಬಾಷ್ಪಗಳನ್ನು ಹನಿ ಸುತ್ತಾ ಅದನ್ನವರು ಸ್ವೀಕರಿಸಿದರು. ಅವರ ಕೈಯಲ್ಲಿದ್ದ ಮಗುವನ್ನು ಮಾತಾ ವಾತ್ಸಲ್ಯದಿಂದ ಮುದ್ದಿಸಿದೆ. ಅಂದಿಗೆ ಅದು ನನ್ನ ಬಂಧನದಿಂದ ಬಿಡುಗಡೆ ಹೊಂದಿತು. ಈಗ ಅದವರ ಮಡಿಲಲ್ಲಿ ಸುಖ ಸಂಪತ್ತನ್ನು ಸವಿ ಯುತ್ತಾ ಬೆಳೆಯುತ್ತಿರಬಹುದು. ಎಲ್ಲಾದರೂ ಸುಖದಿಂದ ಇರಲಿ.

"ಆಸ್ಪತ್ರೆಯಿಂದ ಬಿಡುಗಡೆ ಹೊಂದಿದೆ. ಅವಮಾನದ ಭಾರದಿಂದ ಮಾರ್ಗ ತಿರುಗಲು ಹೇಸುತ್ತಿದ್ದ ಹೊರೆಯೊಂದು ಇಳಿಯಿತು. ಪುನಃ ನನ ಗಾರು ಗತಿ ? ಬಾಳಿನ ಗೋಳು ಪುನಃ ನನ್ನನ್ನು ಮುತ್ತಿತು. ಜೀವನಕ್ಕೆ ದಾರಿಯಿಲ್ಲ. ಇನ್ನು ಮದ್ರಾಸಿನಲ್ಲಿ ಉಳಿಯಬಾರದೆಂದುಕೊಂಡೆ. ಮತ್ತೊಮ್ಮೆ ನನ್ನ ಆಶ್ರಯದಾತ ರಾಯರನ್ನು ಕಂಡೆ. ನನ್ನ ಗೋಳಿನ ಕಥೆಯನ್ನು ಅವ ರಲ್ಲಿ ತೋಡಿಕೊಂಡೆ. ಅವರಿಂದ ಜನಿಸಿದ ಮಗುವನ್ನು ಬೇರೊಬ್ಬರಾಶ್ರಯ ದಲ್ಲಿ ಬೆಳೆಯಲು ಕಳುಹಿಸಿರುವುದಾಗಿ ತಿಳಿಸಿದೆ. ಅವರೇನೋ ಮೊಸಳೆಯ ಕಣ್ಣೀರು ಸುರಿಸಿದರು. ಇನ್ನು ನಾನು ಆ ಊರಲ್ಲೇ ನಿಲ್ಲುವುದಿಲ್ಲ. ಎಲ್ಲಾ ದರೂ ಪರವೂರಿಗೆ ಹೋಗುವೆನೆಂದು ಹೇಳಿದೆ. ಮಾರಿ ತೊಲಗಿತೆಂದು ಭಾವಿಸಿದರೋ ಏನೋ ? ಅವರ ಹೃದಯ ವೇದನೆಯು ಮುಖದಲ್ಲಿ ಮುದ್ರೆಯೊತ್ತುತ್ತಿತ್ತು. ಪಾಪ ! ಎಷ್ಟೆಂದರೂ ನನ್ನಲ್ಲಿದ್ದ ಮಧುಮಾಧು ರ್ಯವನ್ನು ಹೀರಿದವರಲ್ಲವೇ ? ನಾನು ದೈನ್ಯತೆಯಿಂದ ನಿಷ್ಠುರಳಾಗಿದ್ದೆ.

ಅವರನ್ನು ಕಂಡು ಕನಿಕರವಾಗಿತ್ತು. ನನಗೊಂದು ಐವತ್ತು ರೂಪಾಯಿ ಯನ್ನು ದಯಪಾಲಿಸಬೇಕೆಂದು ಕೇಳಿಕೊಂಡೆ. ಅವರ ಮುಖ ಕಪ್ಪಿಟ್ಟಿತು. ಎಷ್ಟಾದರೂ ಅದು ಹಣವಲ್ಲವೆ? ಮತ್ತೊಮ್ಮೆ ಬೇಡಿದೆ. ಆಗಲೂ ಅವರ ಒಪ್ಪಿಗೆ ದೊರೆಯಲಿಲ್ಲ. ಆದರೆ ಮುಖಭಾವ ಮಾತ್ರ ಗಳಿಗೆಗಳಿಗೆಗೂ ಪರಿವರ್ತಿ ಸುತ್ತಿತ್ತು. ಅದೇನನ್ನೋ ಆಶಿಸುತ್ತಿತ್ತು. ಕೊನೆಯ ಬಾರಿ ಹಣ ಕೊಡು ವಿರೋ ಇಲ್ಲವೋ ಎಂದು ಕೇಳಿದೆ ಅವರ ಚಂಚಲ ಪ್ರವೃತ್ತಿ, ಅವರ ದುರಾಲೋಚನೆಯನ್ನು ಅಸ್ಪಷ್ಟವಾಗಿ ಪ್ರಕಟಿಸಿತು. ನಾನವರ ಅಂತರ್ಯ ವನ್ನರಿತೆ. ಹಣ ಕೊಡುವುದಿದ್ದರೂ ಪ್ರಯೋಜನವಿಲ್ಲದೆ ಕೊಡಬಾರ ದೆಂದು ಅವರ ಭಾವನೆ. ಹಣದ ಅಗತ್ಯ ಬಿದ್ದುದು ನನಗೆ. ನನ್ನಿಂದ ಪಡೆ ಯಬಹುದಾದೆಲ್ಲ ಸುಖವನ್ನು ಅನುಭವಿಸಿ ಹೊರಕ್ಕಟ್ಟಿದರೂ, ಅವರ ಅನ್ನ ಉಂಡವಳಲ್ಲವೆ ನಾನು? ಅವರ ಮನದ ಬಯಕೆಯನ್ನು ತೀರಿಸಬೇಕೆಂದು ಕೇಳಿದರು. ಅಯ್ಯೋ! ಗಂಡಸಿನ ಮನವೆ? ಹೆಣ್ಣನ್ನು ಕಂಡೊಡನೆ ಅವರ ಮನದಲ್ಲಿ ಮೂಡುವ ಭಾವನೆಗಳೆ? ನೀರಲ್ಲಿ ಕತ್ತಿನ ತನಕ ಮುಳು ಗಿರುವಾಗ, ಚಳಿಯ ಭಯವಿನ್ನೇನಿದೆ ಎಂದು ಅವರನ್ನು ಅವರ ಆಕಾಂಕ್ಷಾ ಪೂರ್ಣತೆಗಾಗಿ ಸ್ವಾಗತಿಸಿದೆ. ಬಳಿಯಲ್ಲೇ ಇದ್ದ ಹೊಟೇಲ್ ರೂಮನ್ನು ಬಾಡಿಗೆಗೆ ಪಡೆದರು. ಭೋಜನಾದಿ ಸುಖ ಸಂತೋಷಗಳ ಸಂಭ್ರಮವನ್ನು ಒದಗಿಸಿದರು. ಮೂರು ತಿಂಗಳ ನಂತರ ಅಂದೇ ಸಿಹಿ ತಿಂಡಿಗಳ ಸವಿಯನ್ನು ಕಂಡದ್ದು. ಭಿಕ್ಷಾನ್ನ ತಿಂದು ಬೇಸರ ಹೊಂದಿದ್ದ ನಾಲಿಗೆಗೆ ಆ ಸವಿ.... ........ಚೆಲ್ಲಾಟವಾಡಿ ಮನತೃಪ್ತಿಗೊಂಡರು. ಒಂದಿಡೀ ರಾತ್ರಿ ಆನಂದ ದಿಂದ ಕಳೆದರು. ನಾನಾವ ಆನಂದಕ್ಕೂ ಅಡ್ಡಿ ಮಾಡಲಿಲ್ಲ. ಬೆಳಿಗ್ಗೆ ಐವತ್ತು ರೂಪಾಯಿಯನ್ನು ನನ್ನ ಕೈಗಿತ್ತರು. ಕೊನೆಯ ಬಾರಿಗೆ ನಾನವ ರನ್ನು ವಂದಿಸಿದೆ. ಅದೇ ದಿನ ನನ್ನ ಪ್ರಯಾಣ ಸಾಗಿತು. ರಾಯರ ಕೊನೆಯ ಉಪಕಾರದಿಂದ ಮಂಗಳೂರ ಪ್ರಯಾಣವನ್ನು ಸಾಂಗಗೊಳಿಸಿದೆ.

"ಮಂಗಳೂರು ಸೇರಿದಾಗ ನನ್ನನ್ನು ಗುರುತಿಸಲು ಯಾರಿಂದಲೂ ಸಾಧ್ಯವಿರಲಿಲ್ಲ. ಮೊದಲು ಮಂಗಳೂರಲ್ಲಿದ್ದಾಗ ನಾನು ಅರಳಿದ ಕಮಲ ವಾಗಿದ್ದೆ. ಆದರೆ, ಇಂದು ಕಿತ್ತು ಬಿಸುಟಿದ ಕಮಲ. ಬಾಡಿ ಬಸವಳಿದು ಬಲವಿಲ್ಲದೆ ಬಿದ್ದುಕೊಂಡಿರುವಂತೆ ಪರಿವರ್ತನೆ ಹೊಂದಿದ್ದೆ. ಅಂದು ನಾಟಕ

ದಲ್ಲಿ ಪಾತ್ರ ವಹಿಸಿ ಹೆಸರು ಗಳಿಸಿದ ನನ್ನ ಸ್ನೇಹ ಬೆಳಸಲು ಮುಂತಾದ ಹಲವು ಗೆಳೆಯರನ್ನು ನಾನು ಗುರ್ತಿಸಿದರೂ ಅವರಿಗೆ ನನ್ನ ಗುರುತು ಹತ್ತ ಲಿಲ್ಲ. ನಾನಾಗಿ ಅವರನ್ನು ಮಾತಾಡಿಸಿ, ನನ್ನ ಪರಿಚಯವನ್ನಿತ್ತು ಗೆಳೆ ತನ ಬೆಳೆಸಲು ಮುಂದಾಗಲಿಲ್ಲ. ಕಾರಣ: ನನ್ನ ದುಸ್ಥಿತಿಯೂ ನಾಚಿ ಕೆಯೂ ಎನ್ನಬೇಕು. ಆದರೆ ಮುಂದಕ್ಕೆ ನನ್ನ ಬಾಳಿನ ದಾರಿ.... ನಗರದ ಬೆಲೆವೆಣ್ಣಾಗಿ ಕೇರಿಯನ್ನು ಸೇರಲೆ ? ಅಲ್ಲಿಯ ತನಕವೂ ನನ್ನ ದುರಾದೃಷ್ಟ ತಲುಪಿತು. ಛೆ ! ಬೆಲೆವೆಣ್ಣಾಗಿರುವುದು ನನ್ನಿಂದ ಸರಿಬೀಳದು. ಅದಕ್ಕೆಷ್ಟು ಸಲಕರಣೆಗಳಗತ್ಯ. ಬೇರೆಯ್ಕೆಮನೆ ಮಾಡಿ........ನನ್ನಲ್ಲಿಗೆ ಪುರುಷರನ್ನು ಆಕರ್ಷಿಸುವಂತೆ ಬೆಲೆ ಬಾಳುವ ಆಡಂಬರ ವಸ್ತ್ರಭೂಷಣಗಳನ್ನೂ ತರತರದ ಇತರ ಪೋಷಾಕುಗಳನ್ನೂ ಒದಗಿಸಿಕೊಳ್ಳಬೇಕು. ಬಂದ ಪರಪುರುಷರನ್ನು ಸತ್ಕರಿಸಿ, ಚೆಕ್ಕಂದವಾಡಿ, ಸಿರಿತನದ ಮಂಚದಲ್ಲಿ ಮಲಗಿಸಿ, ಆನಂದದಿಂದ ಮುದ್ದಾಡಲು ಮಂಚ........ ಬಂದವರಿಗೆ ಸ್ವಾಗತವಿತ್ತು ಸುಗಂಧ ಪೂಸಿ ಕೂಡ್ರಿಸಲು ಕುರ್ಚಿ........ತಾಂಬೂಲ ಪನ್ನೀರ ಮಳೆ ಸುರಿಯಲು ಬೆಳ್ಳಿಯ ಪೆಟ್ಟಿಗೆಯಾಗಲಿ, ಕಂಚಿನ ದಾನಿಯಾಗಲೀ ನನ್ನಲ್ಲಿರಲಿಲ್ಲ. ಒಟ್ಟಿನಲ್ಲಿ, ನನ್ನಲ್ಲಿ ' ಇಲ್ಲ ' ಎಂಬ ವಸ್ತುಗಳೇ ಜಾಸ್ತಿಯಾಗಿದ್ದುವು. ಹೀಗಿರುವಾಗ, ಸ್ತ್ರೀಲೋಲ ವಿಟ ಪುರುಷನನ್ನು ಬರಮಾಡಿ ನಾನೆಂತು ಒಲಿಸಿಕೊಳ್ಳಲಿ ? ನನ್ನಲ್ಲಿ ಉಳಿದಿದ್ದುದು ದೈವ ನಿರ್ಮಿತ ಸೌಂದರ್ಯ ಮಾತ್ರ. ಅದೂ ಬಸ ವಳಿದು ರಸಹೀನಗೊಂಡ ಸೌಂದರ್ಯ. ಕಾಮುಕರಿಗೆ ಅದರ ಗೊಡವೆ ಇಲ್ಲವೆನ್ನಿ. ಇನ್ನು ನನ್ನಲ್ಲಿ ಉಳಿದ ಹಣವೆಂದರೆ ಇಪ್ಪತ್ತು ರೂಪಾಯಿ ಗಳು ಮಾತ್ರ. ಇವಿಷ್ಟರಿಂದ ನಾನೆಷ್ಟು ವಸ್ತು ಸಲಕರಣೆಗಳನ್ನು ಒದಗಿಸಿ ಯೇನು ? ರಂಗಿನಿಂದ ಶೋಭಿಸುವ ಬೆಲೆವೆಣ್ಣಾಗಿ ಮೆರೆದು ನಗರದ ಸಿರಿವಂತರ ರಕ್ತವನ್ನೆಂತು ಹೀರಲಿ ? ಅವರ ಮದದರ್ಪವನ್ನು ಕಂಡಾಗ ಎಂಥ ಹೇಯ ವರ್ತನೆಯಿಂದಾದರೂ ರಕ್ತ ಹೀರಿ ಹಣ ಸುಲಿಯಬೇಕೆಂಬ ಆಕಾಂಕ್ಷೆಯಾಗುತ್ತಿತ್ತು. ಅದಕ್ಕೆ ತಕ್ಕ ಸಲಕರಣೆ ಇಲ್ಲದ್ದೊಂದು ಕೊರತೆ. ಅಲ್ಲದೆ ಅರೆನಗ್ನಳಾಗಿ ಬಾಗಿಲ ಮರೆಯಲ್ಲಿ ನಿಂತು ಮೋಹದ ಭಂಗಿಯನ್ನು ರಸ್ತೆಯ ಪ್ರೇಕ್ಷಕರಿಗೆ ತೋರ್ಪಡಿಸಿ, ಮಂದಹಾಸದ ಮೋಹಜಾಲವನ್ನು ಬೀಸಿ, ಅವರ ಮನ ಸೆಳೆಯುವುದು ಸರಿಯಲ್ಲವೆಂದು ತೋರಿತು. ಹೊಟ್ಟೆಗೆ

ಕೂಳಿಲ್ಲದಿದ್ದರೂ ಅರೆನಗ್ನ ದೇಹವನ್ನು ಊರವರಿಗೆ ತೋರಿಸಿಕೊಳ್ಳುವುದು ಸರಿಯಲ್ಲವೆಂದು ತೋರಿತು. ಅಯ್ಯೋ! ನನ್ನ ವಿದ್ಯೆ, ಸಂಸ್ಕೃತಿ, ಸ್ಥಾನ, ಮಾನಗಳ ಭಾಗ್ಯವೇ ಎಂದುಕೊಂಡೆ.

"ಉಳಿಕೊಳ್ಳಲು ಚಿಕ್ಕದೊಂದು ಕೋಣೆಗಾಗಿ ಇಡೀ ಊರನ್ನೇ ಸುತ್ತಿದೆ. ಎಲ್ಲಿಯೂ ನನಗೊಂದು ಚಿಕ್ಕ ಕೋಣೆ ಬಾಡಿಗೆಗೆ ದೊರೆಯಲಿಲ್ಲ. ನನ್ನ ಬಾಡಿ ಮುದುರಿದ ಕಮಲದಂತಹ ಈ ಅಶಕ್ತ ಮೈ ನಗರವಿಡೀ ಅಲೆದು ಬಹಳ ಸೋತಿತ್ತು. ಎಷ್ಟು ವಿಚಾರಿಸಿದರೂ, ಅಷ್ಟೊಂದು ವಿಶಾಲ ನಗರ ದಲ್ಲಿ ನನಗಾಸರೆ ದೊರೆಯಲಿಲ್ಲ. ಕೊನೆಗೆ ಹೇಳಿ ಕೇಳಿ, ಕಾಡಿ ಬೇಡಿದ ನಂತರ ಬಸವನ ಗುಡಿಯ ಬಳಿ, ಒಂದು ಚಿಕ್ಕ ಕೊಠಡಿ ಬಾಡಿಗೆಗೆ ದೊರೆ ಯಿತು. ಆ ಮನೆಯೊಡತಿ ನನ್ನನ್ನು ಕಂಡು ಸಮಾಚಾರ ತಿಳಿದು ಬೇಸರ ಗೊಂಡು, ಕನಿಕರದಿಂದ ಹುಲ್ಲು, ಸೌದೆ ತುಂಬಿಸಿಟ್ಟಿದ್ದ ಕೋಣೆಯನ್ನು ಖಾಲಿ ಮಾಡಿಸಿ ನನ್ನ ವಸತಿಗಾಗಿ ಬಿಟ್ಟುಕೊಟ್ಟಳು. ಅಂದು ಅವಳಿಗೆ ನಾನು ಋಣಿಯಾಗಿದ್ದೆ. ನಂತರ ಉದರಪೋಷಣೆಯ ಹಾದಿ. ಮೈ ಕೈ ಗಟ್ಟಿಯಾಗಿರುವಾಗ ಯಾರ ಹಂಗಿಗೂ ಬೀಳದೆ ಮೈನುರಿಸಿ ಕೆಲಸ ಮಾಡ ಬೇಕೆಂದು ತೀರ್ಮಾನಿಸಿಕೊಂಡೆ. ಆ ವಿಷಯವಾಗಿ ಕರುಣಾಮೂರ್ತಿ ನನ್ನ ಆಶ್ರಯದಾತಳೊಂದಿಗೆ ವಿಚಾರಿಸಿದೆ. ಬಳಿಯಲ್ಲೇ ಇದ್ದ ಶ್ರೀಮಂತರೋ ರ್ವರ ಮನೆಯಲ್ಲಿ ವಿಚಾರಿಸುವಂತೆ ತಿಳಿಸಿದರು. ನಾನು ಅವರನ್ನು ಕಂಡು ವಿಚಾರಿಸಿ, ಆ ಸಿರಿವಂತ ಶೇಟರ ಮನೆಯಲ್ಲಿ ಹೊರಕೆಲಸದ ಆಳಾಗಿ ಬಾಳ ತೊಡಗಿದೆ. ಹೊತ್ತಾರೆಯಿಂದ ಬೈಗಿನ ತನಕ ಮುಸುರೆ ತಿಕ್ಕಿ, ಕಸಗುಡಿಸಿ, ನೀರು ತುಂಬಿಸಿ, ಕೊಟ್ಟಿಗೆ ಕೆಲಸಮಾಡಿ, ಮನೆ ಸಾರಿಸಿ, ವಸ್ತ್ರ ಒಗೆದು ಮಕ್ಕ ಳನ್ನು ನೋಡಿಕೊಂಡಷ್ಟರಲ್ಲಿ ನನ್ನ ಕೆಲಸ ಮುಗಿಯುತ್ತಿತ್ತು. ಪ್ರತಿಫಲ ವಾಗಿ ಎರಡು ಹೊತ್ತು ಕಾಫಿ, ಸ್ವಲ್ಪ ಅನ್ನ ಮತ್ತು ತಿಂಗಳ ಕೊನೆಯಲ್ಲಿ ಐದು ರೂಪಾಯಿ. ಮತ್ತಾರಾದರೂ ಬಂದು ಹೋಗುವವರ ಕಿಂಚಿತ್ತು ಬಹುಮಾನ. ನನಗೆ ಇಷ್ಟೆಲ್ಲ ಕಷ್ಟ ಸಹಿಸದೆ ನಮ್ಮವರಲ್ಲಿ ಎಲ್ಲಿಯಾದರೂ ಒಳಕೆಲಸಕ್ಕೆ ಆಳಾಗಿ ಸೇರಿಕೊಳ್ಳಬಹುದಿತ್ತು. ಆದರೆ ನನ್ನ ಅನುಭವವೇ ನನಗೆ ಸಾಕಾಗಿತ್ತು. ಎಂತಹ ಸದ್ಗುಣ, ಸತ್ಪುರುಷನೇ ಆಗಲಿ, ಜವ್ವನ ಸ್ತ್ರೀಯ ಇದಿರಲ್ಲಿ ಅವನೆಂಥ ಪಾಪಿಯಾಗಲೂ ಸಿದ್ಧನಾಗುತ್ತಾನೆ. ಅದಕ್ಕೆ

ನಾನು ಪಟ್ಟ ಪಾಡೂ, ನನ್ನ ಅನುಭವದಿಂದ ದೊರೆತ ಪ್ರಸಾದವೂ ಅಂತಹ ಹೇಯ ಕೆಲಸಕ್ಕೆ ಮುಂದಾಗದಂತೆ ತಡೆ ಹಿಡಿದಿತ್ತು.

" ಶೇಟ್ ಶ್ರೀಮಂತ. ಚಿನ್ನ, ಮುತ್ತು ಹವಳಾದಿ ನವರತ್ನಗಳ ವ್ಯಾಪಾರಿ. ರಖಂ ಆಗಿ ಮುತ್ತುಗಳನ್ನು ತರಿಸಿ, ಊರಲ್ಲೂ ಪರವೂರುಗಳಲ್ಲೂ ಅದನ್ನು ಮಾರಾಟ ಮಾಡುತ್ತಿದ್ದ. ಅದೆಷ್ಟೋ ಗಿರಾಕಿಗಳು ಲಾಭ ಪಡೆಯುವ ಆಶೆಯಿಂದ ಗುಪ್ತವಾಗಿ ಅವನ ಮನೆಗೆ ಬಂದು ಚಿನ್ನದ ವ್ಯಾಪಾರ ಮಾಡುತ್ತಿದ್ದರು. ಹಲವು ಕಳವು ಮಾಲುಗಳೂ ಅಲ್ಲಿಗೆ ಬರುತ್ತಿದ್ದುವು. ಅದೃಷ್ಟವಂತರಿಗೆ ವ್ಯಾಪಾರದಿಂದಲೇ ವೃದ್ಧಿ ದೊರೆಯಬೇಕೆಂದಿಲ್ಲ. ಆ ಹಿರಿಗ್ರಹ ಕೊಡದಲ್ಲಿ ಸಿರಿತನ ಉಕ್ಕಿ ಹರಿಯುತ್ತಿತ್ತು. ಮನೆಯಲ್ಲಿ ಗಂಡ ಹೆಂಡಿರು ಮತ್ತು ನಾಲ್ಕು ಜನ ಮಕ್ಕಳು. ಎರಡು ಶಾಲೆಗೆ ಸೇರಿದ ಮಕ್ಕಳು, ಇನ್ನೆರಡು ಬಾಲ್ಯ ಚೇಷ್ಟೆಯಾಡುವ ಹಸುಳೆಗಳು. ಎಲ್ಲ ವಿಧದ ಕೆಲಸಗಳೂ ನನ್ನ ಪಾಲಿಗೆ ಇದ್ದುವಾದರೂ, ಅಷ್ಟೇನೂ ಹೆಚ್ಚಿನವಲ್ಲ. ಚಿಕ್ಕ ಸಂಸಾರದ ಚೊಕ್ಕಟ ಕೆಲಸಗಳು. ಅಲ್ಲದೆ, ಅವರ ದಯಾರ್ದ್ರ ಹೃದಯದಿಂದಾಗಿ ನನ್ನ ಲೆಕ್ಕದ ತಿಂಡಿ ತಿನಸುಗಳಲ್ಲದೆ ಹೆಚ್ಚಾಗಿ ಉಳಿದುದನ್ನು ಕೊಟ್ಟುಬಿಡುತ್ತಿದ್ದರು. ಆದ್ದರಿಂದ ನನ್ನ ಏಕೋದರ ಪೋಷಣೆಯು ಸಾಂಗವಾಗಿತ್ತು. ನನ್ನ ಮನೆಯಲ್ಲಿ ನನಗೆ ಅಡಿಗೆ ಮಾಡುವ ಕೆಲಸವೇ ಇರಲಿಲ್ಲ.

" ನಮ್ಮ ಈಗಿನ ರಾಯರ ಪರಿಚಯ ಬೆಳೆದುದು ನನಗಲ್ಲಿಯೇ. ವಾರಕ್ಕೊಂದು ಬಾರಿಯಾದರೂ ಅವರಲ್ಲಿಗೆ ಬಂದು ಹೋಗುತ್ತಿದ್ದರು. ಅವರ ಚಿಕ್ಕ ವ್ಯಾಪಾರದ ಮೂಲಭೂತ....ನಾನು ಕೆಲಸಕ್ಕೆ ನಿಂತ ಮನೆಯ ಯಜಮಾನರು. ನಾನು ನನ್ನ ಕೆಲಸಗಳಲ್ಲಿ ನಿರತಳಾಗಿರುತ್ತಿದ್ದೆ. ನಾನು ನನ್ನ ಜೀವನದ ಸುಖ ಕಷ್ಟಗಳನ್ನು ಮರೆತು, ಮಾನ ಅಪಮಾನಗಳನ್ನು ಮರೆಮಾಡಿ ಅಲ್ಲಿ ದುಡಿಯುತ್ತಿದ್ದೆ. ಆದರೆ, ನಾನೇನನ್ನು ಮರೆ ಮಾಡಿದರೂ ನನ್ನ ಯೌವನವನ್ನೂ, ಅದರ ಸಖಿಯಾಗಿದ್ದ ಸೌಂದರ್ಯವನ್ನೂ ಮರೆ ಮಾಡುವ ಸಾಮರ್ಥ್ಯ ನನ್ನಲ್ಲಿರಲಿಲ್ಲ. ಬಂದು ಹೋಗುತ್ತಿದ್ದ ರಾಯರು, ಕಸಗುಡಿಸುವಾಗಲೋ, ಮನೆ ಒರೆಸುವಾಗಲೋ, ಅಂಗಳದಲ್ಲಿ ವಸ್ತ್ರ ಒಣಗಿಸುವಾಗಲೋ ನನ್ನನ್ನು ನೋಡುತ್ತಿದ್ದರು. ಅದಾವುದೋ ಒಂದು ನವೀನ ನೋಟವನ್ನು ಬೀರಿ ನನ್ನ ತೊಂಪರೆಗಳಿಗೆ ಕನಿಕರಪಡುತ್ತಿದ್ದರು. ನನ್ನ

ಬಾಡಿದ ರೂಪವು ಜನರಲ್ಲಿ "ನೀನೇಕೆ ಹೀಗಿದ್ದೀ" ಎಂಬ ಪ್ರಶ್ನೆಯನ್ನು ಮೂಡಿಸುತ್ತಿತ್ತು. ಅವರು ನನ್ನಲ್ಲೇ ನೆಟ್ಟ ದೃಷ್ಟಿಯಿಂದ ನೋಡುತ್ತಿರುವಾಗ ನನಗೇಕೋ ಬೇಸರವಾಗುತ್ತಿತ್ತು. ತದನಂತರ ಅವರನ್ನು ಕಂಡಾಗಲೆಲ್ಲಾ ಬೆದರಿಕೊಳ್ಳುತ್ತಿದ್ದೆ. ಆದರೆ ಒಂದು ದಿನ ನಾನು ಶೇಟರಲ್ಲಿಂದ ಹಿಂತಿರುಗುವಾಗ ಅವರು ನನ್ನನ್ನೇ ಹಿಂಬಾಲಿಸಿ ಬಂದರು. ನಾನು ಮನೆ ಹೊಕ್ಕಾಗ ಅವರೂ ಮೆಟ್ಟಿಲ ಬಳಿ ಸೇರಿದ್ದರು. ಹಲವಾರು ಬಾರಿ ನೋಡಿದಂಥ ಅಲ್ಪ ಪರಿಚಯದ ಗೃಹಸ್ಥರೆಂಬ ಭಾವನೆಯಿದ್ದುದರಿಂದ ನಾನೇನು ಆತಂಕ ಪಡಲಿಲ್ಲ. ಬದಲು ಅವರಾವ ಕಾರ್ಯಕ್ಕಾಗಿ ಬಂದಿರುವರು ಎಂದು ವಿಚಾರಿಸಲು ಮುಂದಾಗಿ, ಅವರನ್ನು ಒಳಕರೆದು ಒಂದು ಚಿಕ್ಕ ಚಾಪೆಯಲ್ಲಿ ಕುಳ್ಳಿರಿಸಿದೆ.

"ಮತ್ತೆ ನಾನೇನನ್ನೂ ಮಾತಾಡಲಿಲ್ಲ. ಅವರು ನನ್ನ ಗೃಹವನ್ನೆಲ್ಲ ಪರೀಕ್ಷಿಸಿದರು. ನನ್ನ ದುರವಸ್ಥೆ ಕಂಡು ಅವರಿಗೂ ಮರುಕ ಹುಟ್ಟಿರಬೇಕು. ನನ್ನ ಮನೆಯೊಡವೆಯೆಂದರೆ ನಾಲ್ಕು ಗಡಿಗೆ, ಒಂದೆರಡು ಹರಕು ವಸ್ತ್ರ....ಮಣೆ....ಹಿಡಿಸೂಡಿ....ಮತ್ತೊಂದು ಮೂಲೆಯಲ್ಲಿ ಒಲೆಯುರಿಸಲು ಕೆಲವು ಕಸಕಡ್ಡಿಗಳು. ಗೋಡೆಯಲ್ಲಿ ಅರ್ಧ ಒಡೆದ ಕನ್ನಡಿಯ ಲಕ್ಷ್ಮಿ, ಸರಸ್ವತಿ, ಗಣಪತಿ ದೇವರುಗಳ ನಕಾಶೆ ಇಷ್ಟು ನನ್ನ 'ಅರಮನೆ'ಯ ಆಡಂಬರ. ನಂತರ, ಅವರಾಗಿಯೇ ಮಾತಿಗೆ ಮುಂದಾದರು. ನನ್ನ ಮುಖ ಕಂಡಾಗಲೇ ನಾನು ವಿದ್ಯಾವತಿಯೆಂದು ಊಹಿಸಿದರಂತೆ. ಏನೋ ಕಷ್ಟ ಬಂದಿರಬೇಕೆಂದು ಅವರಿಗೆ ಹೊಳೆಯಿತು. ಒಂದರ ಹಿಂದೊಂದು ಪ್ರಶ್ನೆ ಹಾಕಿ ನನ್ನ ಕತೆಗಳನ್ನೆಲ್ಲಾ ಕೇಳಿಕೊಂಡರು. ನನ್ನ ದುಃಸ್ಥಿತಿಗಾಗಿ ಮರುಕಗೊಂಡರು. ಹಾಳು ದೈವವನ್ನೊಮ್ಮೆ ಬೈದರು. 'ಇನ್ನೂ ಇದೇ ಕೊಳಕು ಕೆಲಸದಲ್ಲಿ ಇರುವಿಯಾ' ಎಂದು ಕೇಳಿದರು. ಹೌದು ಎಂದೆ. ನಂತರ 'ನೀನೇನೋ ಕಷ್ಟ ಸುಖಗಳನ್ನು ಅನುಭವಿಸಿದ ಮಹನೀಯಳು. ಆದರೆ ಇನ್ನು ಮುಂದಕ್ಕಾದರೂ ಸುಖ ಪಡೆಯುವ ಸುಯೋಗ ನಿನಗಿದೆ. ನೀನು ನನ್ನೊಂದಿಗೆ ಬರುವಿಯಾ ? ನಾನಿರುವ ತನಕ ನನಗಿರುವ ಅಪಾರ ದ್ರವ್ಯದಿಂದ ನೀನು ಸುಖವಾಗಿರಬಹುದು. ನನಗಾವ ಬಂಧು ಬಳಗವೂ ಇಲ್ಲ. ನನ್ನ ಸರ್ವಸ್ವವೇ ನಿನ್ನದು. ಒಪ್ಪಿಗೆ ಇದ್ದಲ್ಲಿ ಬಂದುಬಿಡು. ಕಪಟ ಹೃದ

ಯವು ನನ್ನದಲ್ಲ. ನಿನ್ನ ಕಷ್ಟಕ್ಕಾಗಿ ಮರುಗಿ, ನಿನ್ನೀ ಸೌಂದರ್ಯಕ್ಕೆ ಆಶ್ರಯವೀಯಲೆಂದೇ ನಾನು ನಿನ್ನನ್ನು ಕೇಳಿದ್ದೇನೆ.' ಎಂದು ತಮ್ಮ ಕೊನೆಯ ತೀರ್ಮಾನವನ್ನಿತ್ತರು. ಮೊದಲು ನಾನೇಕೋ ನಿರಾಕರಿಸಿದೆ. ಕಾರಣ: ಹೇಳಬೇಕೆ ? ನನ್ನ ಅನುಭವವೇ ನನ್ನ ಮಾರ್ಗದರ್ಶಕವಾಗುತ್ತಿದೆ, ಎಂದೆನಲ್ಲ. ಇನ್ನು ಇವರ ಚಿನ್ನದ ಬಣ್ಣಕ್ಕೆ ಮರುಳಾಗಿ, ಬೀದಿಯ ಬಣ್ಣ ಬಳಿದುಕೊಳ್ಳಬೇಕೆ ? ಎಂದು ತಿರಸ್ಕರಿಸಿದೆ.

"ಆದರೆ ಅವರ ಸ್ಥಿತಿಯನ್ನು ಕೇಳಲು, ಅವರ ಧರ್ಮಪತ್ನಿಯು ಕಳೆದ ವರ್ಷ ತೀರಿಕೊಂಡು ಅವರಿಗುಂಟಾದ ಆಘಾತವೂ, ಅನಂತರ ಅವರು ಮಾಡಿದ ನಿರ್ಧಾರವೂ, ಇಂದು ಅವರನ್ನೀ ನರಕದ ದಾರಿಗೆ ಎಳೆಯುತ್ತಿದೆಯಂತೆ. ಆದರೆ ವ್ಯಾಪಾರ ವ್ಯವಹಾರದಿಂದ ಕೈಯಲ್ಲಿ ಹಣ ಸಂಗ್ರಹವಾಗಿದೆ. ಮನೆ ಕಾರ್ಯಗಳಿಗೆ ಒಬ್ಬ ಹೆಂಗಸು ಅಗತ್ಯವೆಂದು ಕಂಡು ಬಂತಂತೆ. ಆದ್ದರಿಂದ ನನ್ನನ್ನು ಕಂಡಾಗ ಅವರಾವುದೋ ಸುಖಕಲ್ಪನೆ ಬಗೆದು ನನ್ನನ್ನು ಮರೆ ಹೊಕ್ಕರು. ಅವರ ಆರ್ತ ಸ್ಥಿತಿಯನ್ನು ಕಂಡು ನನ್ನ ಮನೋಮಂಡಲದಲ್ಲೊಂದು ಆಶಾತಾರೆಯು ಮಿನುಗಿತು. ಇಷ್ಟೊಂದು ಕನಿಕರದಿಂದ ನನಗಾಗಿ ಹಂಬಲಿಸುವಾಗ ನಾನೇಕೆ ಹೊರಡಬಾರದೆಂದು ನನ್ನಲ್ಲಿಯೇ ಪ್ರಶ್ನಿಸಿದೆ. ಅವರನ್ನು ನೋಡುವಾಗಲೂ ಅಷ್ಟು ದುಷ್ಟರಂತೆ ತೋರಲಿಲ್ಲ. ಕಡೆಗೆ ಯಾರ್‍ಯಾರದೊ ಮನೆಯಲ್ಲಿ ಎಂಜಲು ತೊಳೆದು ಆಧಾರಹೀನ ಬಾಳನ್ನು ಸಾಗಿಸುವದಕ್ಕಿಂತ, ಕಷ್ಟದಲ್ಲಾದರೂ ಒಂದು ಆಧಾರವಿರುವವರ ಮಡಿಲಲ್ಲಿ ಬಿದ್ದಿರುವುದು ಉತ್ತಮವೆಂದು ಕಂಡಿತು. ಅಂತೆಯೇ ಅವರ ಮನೋಭಿಲಾಷೆಯಂತೆ ' ಬರುವೆನಾಗಿ ' ತಿಳಿಸಿದೆ. ಇನ್ನು ಮುಂದಕ್ಕೂ ಏನಾದರೂ ಕೇಡು ಬಂದುದಾದರೆ ಏನಾದರೊಂದು ಹಾದಿ ಹಿಡಿದರಾಯಿತೆಂದು, ಅಂದೇ ನಿರ್ಧರಿಸಿಕೊಂಡೆ. ಹುಟ್ಟಿದ ತಾಯಿ ತಂದೆ ನೆರವಾಗಿ ಬರದಿದ್ದರೂ, ಜನ್ಮವಿತ್ತ ದೇವನೆಂದಿಗೂ ಕೈಬಿಡಲಾರನೆಂದು ನಾನು ಈತನಕವೂ ಭಾವಿಸಿಕೊಂಡಿದ್ದೇನೆ.

"ಅಂದೇ ಆ ಮನೆಯನ್ನು ಬಿಟ್ಟೆನು. ಅವರು ಉಳಿದುಕೊಂಡಿದ್ದ ಹೊಟೇಲಿನ ಕೋಣೆಯಲ್ಲೇ ನಾನೂ ಹೋಗಿ ಉಳಿದುಕೊಂಡೆ. ಅವರು ಪೇಟೆಯಿಂದ ಬರುವಾಗ ನನಗೆ ಬೇಕಾದ ವಸ್ತ್ರಗಳನ್ನೆಲ್ಲಾ ತಂದುಕೊಟ್ಟರು.

ಲವರ ಅಪೇಕ್ಷೆಯಂತೆ ವಸ್ತ್ರಾಲಂಕೃತಳಾಗಿ ನವತಾರೆಯಂತೆ ಶೋಭಿಸಿದೆ. ಒಂದೂವರೆ ವರ್ಷಗಳ ನಂತರ ಪುನಃ ಹಿಂದಿನ ತಾರಳಂತೆ ಶೃಂಗಾರಿಸತೊಡಗಿದೆ. ಮರುದಿನವೇ ಅವರು ನನ್ನನ್ನು ಸಂಗಡ ಕರಕೊಂಡು ಇಲ್ಲಿಗೆ ಪ್ರಯಾಣ ಬೆಳಿಸಿದರು. ಇಂದು ನೋಡಿ ಅದೇ ಆ ಚಿಕ್ಕ ಮನೆಯಲ್ಲಿ, ಚೊಕ್ಕ ಸಂಸಾರವನ್ನು ಹೂಡಿ, ಅವರ ಅರ್ಧಾಂಗಿಯಾಗಿ ಬಾಳುತ್ತಿದ್ದೇನೆ. ಒಂದೆರಡು ವರ್ಷಗಳ ಸುಖ ಜೀವನ ನನ್ನ ಬಳಲಿಕೆಗೆ ವಿಶ್ರಾಂತಿಯೊದಗಿಸಿದೆ. ಇಂದು ನಾನು ಸುಖಿಯಾಗಿದ್ದೇನೆ. ಹಿಂದೆ ಅದೆಷ್ಟೋ ಪಾಪ, ಕ್ರೂರ ಕೃತ್ಯಗಳಿಂದ ಪಾಪಿಷ್ಠಳಾಗಿದ್ದರೂ ಇಂದು ಅದನ್ನೆಲ್ಲ ಮರೆಮಾಡಿ ನಿಮ್ಮೆಲ್ಲರ ಮುಂದೆ ಒಳ್ಳೆ ಗೌರವಸ್ಥಳಂತೆ ಬಾಳಿಕೊಂಡಿರುವೆನು. ನನ್ನ ಬಾಳಿನ ಗೋಳಿನ ಕಥೆ ಯಾರಿಗೂ ತಿಳಿದಿಲ್ಲ. ಆದರೆ........

" ಏನಮ್ಮ ಸಪ್ಪಗಾದಿರಿ ? ನನ್ನ ಕಥೆ ಕೇಳಿ ಬೇಸರವಾಯಿತೆ ? ನನ್ನನ್ನು ಈಗ ಏನೆಂದು ಕರೆಯುವಿರಿ ? ಮೂರ್ಖಳೆನ್ನುವಿರೋ ಅಥವಾ ಪಾಪಿಣಿ ದುರಾತ್ಮಳೆ........ ?

" ಅಲ್ಲ....ನೀವೆಷ್ಟು ಕಾಲೇಜು ವಿದ್ಯಾಭ್ಯಾಸ ಪಡೆದೂ ಅದರಿಂದೇನೂ ಪ್ರಯೋಜನವಾಗಲಿಲ್ಲವಲ್ಲ ?"

" ವಿದ್ಯೆಯೇನಮ್ಮ ? ಅದಾರೋ ಕಟ್ಟಿಕೊಟ್ಟ ಬುತ್ತಿ. ಅಲ್ಲದೆ ಅದು ಪೂರ್ತಿಗೊಳ್ಳದೆ ಕಾರ್ಯವಾಗಿದೆ. ಮತ್ತೆ ನೋಡಿ. ಹೆಣ್ಣು ಎಷ್ಟು ವಿದ್ಯೆ ಪಡೆದರೂ ಪ್ರಯೋಜನವಿಲ್ಲ. ಆಕೆಯ ಬಾಳು ಎಂದಿಗೂ ಸ್ವತಂತ್ರವಲ್ಲ. ಬಳ್ಳಿಯೋಪಾದಿ ಸ್ತ್ರೀ ಜೀವನಕ್ಕೆ ಮರದಂಥ ಪುರುಷನೊಬ್ಬನ ಆಧಾರವಿದ್ದೇ ತೀರಬೇಕು. ಹಾಗಿಲ್ಲದಿದ್ದರೆ ಧೈರ್ಯದಿಂದ ಯಾರನ್ನೂ ಲೆಕ್ಕಿಸದೆ ಮುನ್ನುಗ್ಗಿದ ನನ್ನ ನಿದರ್ಶನವೇನಾಯಿತು ನೋಡಿ. ಗಂಡಿನೊಡಗೂಡಿ ಸಂಸಾರ ವೆಸಗುವಾಗ ವಿದ್ಯೆಯ ಆಡಂಬರ ಹೆಚ್ಚಾಗಿ ಅಗತ್ಯವಿಲ್ಲ. ಯಾವ ಸ್ತ್ರೀಯು ಇಂದು ಸ್ವೇಚ್ಛಾವಿಯಾಗಿ, ವಿದ್ಯೆ ಪಡೆದು ತಾನಿನ್ನು ಸ್ವತಂತ್ರಳೆಂದು ಹಾರಾಡುವಳೋ, ಕೆಲಸಕ್ಕಾಗಿ ಮುನ್ನುಗ್ಗುವಳೋ, ಅಲ್ಲಿ, ಅವಳಿಗೆಂದಿಗೂ ಏಳಿಗೆಯಿಲ್ಲ. ಪುರುಷ ಜಾತಿಗೆ ಸೇರಿದ ಹಲವು ಪಶು ಜೀವಿಗಳ ಕಾಮದ ನಾಲಿಗೆ, ಜೊಲ್ಲಿನ ಸುರಿಮಳೆಗರೆದು ಎಂತಹ ಕಠಿಣ ಹೃದಯದ ಮಹಿಳೆ

ಯನ್ನೂ ಬಲಿ ತೆಗೆದುಕೊಳ್ಳುತ್ತದೆ. ಆದ್ದರಿಂದ ಸ್ತ್ರೀಯಾದವಳ ಸ್ವಾತಂತ್ರ್ಯ ಪ್ರವೃತ್ತಿಗೊಂದು ಮೇರೆಯಿದೆ. ಅದನ್ನು ಮೀರಿದರೆ ಆಕೆಯ ಬಾಳು ಬೀದಿಯ ಬೀಳು....ನಾನೇನೋ ವಿದ್ಯಾಭ್ಯಾಸ ಪೂರ್ತಿಗೊಳಿಸಿ ಒಂದು ಮಾರ್ಗ ಹಿಡಿಯಬೇಕೆಂದಿದ್ದೆ. ಆದರೆ ನನ್ನ ಆಶೆಗಳೆಲ್ಲವೂ ಮಣ್ಣುಪಾಲಾದುವು. ಶ್ರೀನಿವಾಸನ ಆಧಾರ ಪಡೆದಿದ್ದ ನನ್ನನ್ನು ನೆಲೆಯಿಲ್ಲದ ಗುಂಡಿಗೆ ದಬ್ಬಿ ಬಿಟ್ಟರು ನನ್ನ ರಕ್ಷಕರು. ಇಂದು ಅವರನ್ನು ದೂರಲೇ ? ಇಲ್ಲಿ ಅವರದೇನು ತಪ್ಪು ? ನಮ್ಮನ್ನಾಳುತ್ತಿದ್ದ ಸಮಾಜವೆಂತಿದೆ ? ಅದನ್ನು ನೋಡಬೇಕು. ನನ್ನ ತಂದೆ ತಾಯಿಗಳು ಸಮಾಜಕ್ಕೆ ಹೆದರಿದ್ದುದಾದರೂ ನಾನೀ ತನಕ ಆ ಸಮಾಜಕ್ಕೆ ಹೆದರಿದ್ದೆನೆಂದಿಲ್ಲ. ಅಲ್ಲ; ನನ್ನ ಹೆತ್ತವರಿಗೆ ನಾನು ಸತ್ತಿರುವೆನೆಂಬ ಭಾವನೆಯಿದ್ದರೂ....ಹೆದರಿದ್ದರೆ ಇಂದು ಈ ಸ್ಥಿತಿಯನ್ನು ಕಾಣುವ ಭಾಗ್ಯ ನನಗಿಲ್ಲದೆ ಹೋಗುತ್ತಿತ್ತು. ಇಂದು ಎಷ್ಟೋ ಸುಶಿಕ್ಷಿತ ಜೀವಿಗಳ ಅಧೋನ್ನತಿಗೆ ಕಾರಣ ಈ ಕುಟಿಲ ಸಮಾಜವೆಂಬುದನ್ನು ನಾನು ಎದೆತಟ್ಟಿ ಹೇಳಬಲ್ಲೆ. ಏನೇ ಆದರೂ ನನಗೀಗ ಯಾವ ಪೀಡನೆಯೂ ಇಲ್ಲ. ಸಿರಿಸಂಪತ್ತಿಗೂ ಕುಂದಿಲ್ಲ. ವಿಲಾಸ ವೈಭವಗಳಿಗೂ ಕಡಿಮೆಯಿಲ್ಲ. ಇದೆಲ್ಲವನ್ನೂ ನೀವೀಗ ಕಾಣುತ್ತಿದ್ದೀರಿ. ಅಂದು ನಾನು ಕಲಿಯುತ್ತಿದ್ದಾಗ ನನ್ನ ಸಹಾಯಕನಾಗಿ ಬಂದ ಶ್ರೀನಿವಾಸನೊಡನೆ ಕಳೆಯುತ್ತಿದ್ದ ಸುಖಜೀವನ ವಿಂದು ನನಗೆ ದೊರೆತಿದೆ. ಇವರನ್ನು ಅವನೆಂದೇ ಭಾವಿಸುವ ಸುಯೋಗ ಒದಗಿದೆ. ಆದರೆ ಅವನ ಆ ಗುಣ ನಡತೆ, ಪವಿತ್ರ ಹೃದಯದಲ್ಲಿ ತುಂಬಿದ್ದ ಪ್ರೇಮವನ್ನು ಮಾತ್ರ ನಾನಿವರ ಹೃದಯದಲ್ಲೂ ಈ ಜನ್ಮಾಂತ್ಯದ ತನಕ ಯಾರಲ್ಲೂ ಕಾಣಲಾರೆನು. ಅಂತಹ ವಿವೇಕ ಪುರುಷನು ನನ್ನ ಬಾಳಿನ ಆದರ್ಶನಾಗಿದ್ದರೂ ನಾನು ನನ್ನ ದುಡುಕಿನಿಂದ ಇಲ್ಲದ ಸಲ್ಲದ ಕಾರ್ಯಗಳನ್ನು ನಡೆಸಿದೆ. ಆದರೆ........ ಇಂದಿಗೂ ಅವನೆನ್ನ ಹೃದಯೇಶ್ವರ ಅವನಂತಹ ವ್ಯಕ್ತಿ ಇನ್ನೊಂದಿಲ್ಲ. ಆ ಪರಿಶುದ್ಧ ಆತ್ಮವನ್ನು ನಾನಾವ ಜನ್ಮದಲ್ಲೂ ಮರೆಯಲಾರೆ. ಎಷ್ಟೋ ಸಮಯಗಳ ಘೋರ ಹೋರಾಟದಿಂದ ಇಂದಾವುದೋ ಒಂದು ಶಾಂತಿಯನ್ನು ಪಡೆದಿರುವೆನು. ಇದಕ್ಕೆಲ್ಲ ಕಾರಣ ನನ್ನ ದಿಟ್ಟತನ. ಎಷ್ಟೇ ಕಷ್ಟ ಬಂದರೂ ಸಹನೆಯಿಂದ ಬಾಳಬೇಕೆಂಬ ನನ್ನ ಆದರ್ಶದ **ಆಶಾ ಬಾಳು** ನನ್ನನ್ನಿಂದು ಒಂದು ಸುಸಜ್ಜಿತ

ನೆಲೆಗೆ ತಂದುಬಿಟ್ಟಿದೆ. ಇದು ನನ್ನ ಅದೃಷ್ಟ. ಅದೇ ಕಷ್ಟಗಳಿಗೆ ಹೆದರಿ ಎಲ್ಲಾ ದರೂ ಆತ್ಮಹತ್ಯೆ ಮಾಡಿಕೊಂಡಿದ್ದರೆ........?

"ಮತ್ತೆ ಶ್ರೀನಿವಾಸನ ವರ್ತಮಾನವೇ ಇಲ್ಲವೆ ?"

"ಇಲ್ಲ........ಅವನೇನೋ ಭಾಗ್ಯವಂತ. ಎಲ್ಲೋ ಕಾಲೇಜು ಸೇರಿ ಉತ್ತಮ ವಿದ್ಯೆ ಪಡೆದಿರಬಹುದು. ಇಂದು ಸಂಸಾರಿಯಾಗಿದ್ದು ಸುಖ ಸಂಪತ್ತಿನಿಂದ ಜೀವಿಸಿ, ಹೇರಳ ಹಣ ಸಂಪಾದಿಸಿ, ನನಗಿಂತಲೂ ಎಷ್ಟೋ ಉತ್ತಮ ಹೆಣ್ಣಿನೊಡಗೂಡಿ ಹುಣ್ಣಿಮೆಯ ಬೆಳದಿಂಗಳಿನಂತಹ ಜೀವನ ಸಾಗಿಸುತ್ತಿರಬಹುದು. ಎಲ್ಲಿದ್ದರೂ ಭಗವಂತನವನನ್ನು ಉದ್ಧರಿಸಲಿ!"

ಪಾತ್ರೆಯಲ್ಲಿ ತುಂಬಿದ್ದ ಅಕ್ಕಿ ಕಾಳು ಮುಗಿದುದರಿಂದ ಗರಗರ ತಿರುಗುತ್ತಿದ್ದ ಕಲ್ಲು ತಟಸ್ಥವಾಯಿತು.

"ಏನಮ್ಮಾ ವಿಚಿತ್ರ........ನಿಮ್ಮ ಕಥೆ ಓಡಿದಂತೆಲ್ಲ ಅಕ್ಕಿಯಿಂದೊಡಗೂಡಿದ ಕಲ್ಲು ಜೋರಾಗಿ ತಿರುಗುತ್ತಿತ್ತು. ನಾವಿಷ್ಟು ಬೀಸಿದರೂ ಬೀಸಿದ ಆಯಾಸವೇ ಇಲ್ಲವಾಗಿದೆ. ನಿಮ್ಮ ಕಥೆ ಎಷ್ಟು ಸ್ವಾರಸ್ಯ........" ಎಂದರು ಶಾಂಭವಿ.

"ಸ್ವಾರಸ್ಯವಲ್ಲ........ನನ್ನ ಕರ್ಮದ ದಿನಗಳವು.... ನಾಚಿಕೆ ಬಿಟ್ಟು ಹುಚ್ಚರಂತೆ ವರ್ತಿಸಿದ ಹೇಯ ಜೀವನ!"

"ಕಾಲಸ್ಥಿತಿಗೆ ತಡೆ ಹಾಕುವವರು ಮಾನವರಲ್ಲ. ಅದಕ್ಕೆಲ್ಲ ಪರಮಾತ್ಮನ ಲೀಲೆಯೇ ಕಾರಣ."

ಕಲ್ಲಿನ ಸುತ್ತಲೂ ಪರ್ವತದಂತೆ ಏರು ತಗ್ಗಾಗಿ ಬಿಳಿ ಹಿಟ್ಟಿನ ರಾಶಿ ಹರಡಿತ್ತು. ಶಾಂಭವಿ ಕಲ್ಲನ್ನೆತ್ತಿ ಗೋಡೆಗೆ ಒರಗಿಸಿಟ್ಟರು. ಸುತ್ತಲೂ ಹರಡಿದ್ದ ಹಿಟ್ಟನ್ನು ನಡುವೆ ಕೂಡಿಸಿಟ್ಟರು. "ಇನ್ನು ನೀವು ಸ್ವಲ್ಪ ಕೂತುಕೊಳ್ಳಿ. ನಾನಿದನ್ನು ತುಂಬಿ ತೆಗೆದಿಡುತ್ತೇನೆ" ಎಂದು ಶಾಂಭವಿ ಹಿಟ್ಟನ್ನು ಪಾತ್ರೆಗೆ ತುಂಬತೊಡಗಿದರು. ತಾರಾ ಗೋಡೆಗೆ ಒರಗಿ ಕುಳಿತಳು.

ಹೊರಗೆ ನಸುಗತ್ತಲು ಹರಡಿತ್ತು. ಸೂರ್ಯನ ನಸು ಕೆಂಕಿರಣಗಳು ಮರಗಳೆಡೆಯಿಂದ ತೂರಿ ಬರುತ್ತಿದ್ದುವು. ಹಕ್ಕಿಗಳೆಲ್ಲ ಚಿಲಿಪಿಲಿಗುಟ್ಟುತ್ತ ಮನೆಯೆದುರು ಮರದ ರೆಂಬೆಯಲ್ಲಿ ಅತ್ತಿತ್ತ ಹಾರಾಡುತ್ತಿದ್ದುವು. ಆಕಳು

ಗಳು ಕರುವಿಗೆ ಹಾಲುಣಿಸುವ ಹೊತ್ತಾಯಿತೆಂದು 'ಅಂಬಾ' ಎಂದು ತಮ್ಮ ಹಸುಳೆಗಳನ್ನು ಕರೆಯುತ್ತಿದ್ದುವು. ಮನೆ ಮಾಡಲ್ಲಿ ಕುಳಿತಿದ್ದ ಕಾಗೆ ಯೊಂದು 'ಕಾ ಕಾ' ಎಂದು ಕೂಗುತ್ತಾ ಹಾರಿ ಹೋಯಿತು. ಹೂದೋ ಟದಲ್ಲಿ ಸಂಜೆ ಮಲ್ಲಿಗೆಯು ಅರಳಿ ರಂಜಿಸುತ್ತಿತ್ತು. ಜಾಜಿಯ ಬಳ್ಳಿ ಯಲ್ಲಿ ತುಂಬಿದ್ದ ಹೂಗಳು ಅರೆತೆರೆದು ತಮ್ಮ ಮಧುರ ಕಂಪನ್ನು ಗಾಳಿ ಗೊಡ್ಡಿದ್ದುವು.

"ಅಕ್ಕಿ ಬೀಸಲು ತೊಡಗಿದ್ದಾಗ ಅರಳಿ ರಾರಾಜಿಸುತ್ತಿದ್ದ ಸೂರ್ಯ ಕಾಂತಿ—ನವಯೌವನದಿಂದ ತುಂಬಿ ತುಳುಕಾಡುತ್ತಿದ್ದ ಯುವತಿಯಂತೆ ಶೋಭಿಸಿ, ಯೋಗ್ಯ ಪುರುಷನೋರ್ವನ ಆಸರೆ ಪಡೆಯಲು ಹಾತೊರೆಯು ತ್ತಿರುವ ಮುಗುದೆಯಂತಿತ್ತು—ಆದರೆ........ಕಾಲನ ಲೀಲೆ........ಅದು ಕಂಡ ಕನಸು ನನಸಾಗಲಿಲ್ಲ. ಸುಂದರ ತರುಣಿಯೋರ್ವಳ ತುರುಬನ್ನೇರಿ ಮೆರೆ ಯುವ ಭಾಗ್ಯವೂ ಲಭಿಸಲಿಲ್ಲ. ಪ್ರಿಯಕರನ ಪ್ರಣಯ ತೆಕ್ಕೆಯಲ್ಲಿದ್ದು ಸುಖವ ಪಡೆಯುವ ಸುಯೋಗವೂ ಒದಗಲಿಲ್ಲ. ಈಗಲೀಗ, ನಿರಾಕೃತ ಳಾಗಿ ಊರವರ ಕಣ್ಣಿಗೆ ಅಣಿಯಾಗಿ ತೊಳಲಾಡುತ್ತಿರುವ ನಿಸ್ಸಾರ ಬಾಳಿನ ಮುದಿ 'ಯುವತಿ' ಯಂತೆ ಬಾಡಿಕೊಂಡಿದೆ. ವಿಧವೆಯಂತೆ ಗಿಡವಿಡೀ ಕಳೆಹೀನವಾಗಿತ್ತು. ಸಂಸಾರ ತಾಪತ್ರಯಗಳನ್ನೆಲ್ಲ ಸೈರಿಸಿ ಬಳಲಿ ಬೆಂಡಾ ದಂತೆ ತೋರುತ್ತಿತ್ತು. ಅಯ್ಯೋ........ ಬಾಳ್ವೆಯೇ ? ಅಷ್ಟೊಂದು ನಗು ಮೊಗದಿಂದಿದ್ದ ಗಿಡವೀಗ ತಾರಳ ಬಾಳಿನಂತೆ ಬೇಗೆಯಿಂದ ಬಾಡಿ ಹೋಗಿದೆ.

ಗೆರಸೆಯಲ್ಲಿದ್ದ ಹಿಟ್ಟು ಪಾತ್ರೆಯಲ್ಲಿ ತುಂಬಿತ್ತು. ಕಲ್ಲು, ಹಿಟ್ಟು, ಎಲ್ಲವನ್ನೂ ಒಳಗಿರಿಸಿ ಬಂದರು ಶಾಂಭವಿ. ತಾರಳೊಂದು ನಿಟ್ಟುಸುರು ಬಿಟ್ಟು ಕುಳಿತಲ್ಲಿಂದ ಎದ್ದಳು.

"ನಾನಿನ್ನು ಬರುತ್ತೇನಮ್ಮ—....ಕತ್ತಲಾಯಿತು."

"ನಿಲ್ಲಿ—ನಿಲ್ಲಿ.... ಕುಂಕುಮವಿಟ್ಟುಕೊಂಡು ಹೋಗಿಯಮ್ಮ."

ಶಾಂಭವಿ ತಾರಳ ಹಣೆಯಲ್ಲಿ ವೃತ್ತಾಕಾರದ ಚಿಕ್ಕ ಕುಂಕುಮದ ಬೊಟ್ಟನ್ನಿಟ್ಟರು. ತಾರಳ ವಿಶಾಲ ಹಣೆಯಲ್ಲಿ ಚಂದ್ರನುದಯಿಸಿದಂತೆ

ಅದು ಕಂಗೊಳಿಸಿತು. ಅಬ್ಬ! ಕುಂಕುಮದ ಮಹತ್ವವೇ? ಸ್ತ್ರೀಯಾ ದವಳ ಸೌಂದರ್ಯ ಕಲೆಯ ರಾಣಿಯೇ ಹಣೆಯಲ್ಲಿದ್ದ ಕುಂಕುಮ ತಿಲಕ! "ಬರುತ್ತೇನಮ್ಮಾ" ಎಂದು ತಾರಾ ಸೆರಗನ್ನು ಸರಿಪಡಿಸಿಕೊಂಡು ಹೊರ ಬಂದಳು. ಶಾಂಭವಿ ಕುಂಕುಮದ ಡಬ್ಬಿಯನ್ನಿಡಲು ಒಳನುಸುಳಿದರು.

ಹೊಸ್ತಿಲಲ್ಲೇ ಕುಳಿತಿದ್ದ ಬೆಕ್ಕು, ಇವರ ಕಥೆ ಕೇಳಿ ದುಃಖದಿಂದಲೋ ಆನಂದದಿಂದಲೋ 'ಮೀಯಾಂ' ಎಂದು ವೈಯ್ಯಾರದಿಂದ ಒಳ ನಡೆ ಯಿತು.

ಮಂಗಲಂ.

